# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೯, ೨೦೧೬ (ಆಶ್ವಯುಜ ೭, ಶಕ ವರ್ಷ ೧೯೩೮)<br>Bengaluru, Thursday, September 29, 2016 (Aashwayuja 7, Shaka Varsha 1938) | ಸಂಚಿಕೆ ೩೯<br>Issue 39 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ:** ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ 2016-17ರ ಹಣಕಾಸು ವರ್ಷದ ಮೊದಲನೇ ತ್ರೈಮಾಸಿಕಕ್ಕೆ ಸಹಾಯಾನುದಾನದ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 3 ಟಿಎಫ್‌ಪಿ 2016 ದಿನಾಂಕ: 02-04-2016.

2. ಕವಿನಿ ಆಯೋಗದ ಪತ್ರ ಸಂಖ್ಯೆ: ನಂ. ಎಫ್/ 16/ ಎಬಿ/ ಕೆಇಆರ್‌ಸಿ/633 ದಿನಾಂಕ: 13-05-2016

**ಪ್ರಸ್ತಾವನೆ:-**

1. 2016-17ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ಒದಗಿಸುವ ಸಲುವಾಗಿ ₹. 312.00 ಲಕ್ಷಗಳ ಅನುದಾನವನ್ನು ನಿಗಧಿಪಡಿಸಲಾಗಿದೆ. ಈ ಸಹಾಯಾನುದಾನವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 3 ಟಿಎಫ್‌ಪಿ 2016 ದಿನಾಂಕ: 02-04-2016ರಲ್ಲಿ ಆಡಳಿತ ಇಲಾಖೆಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚಗಳ ಸಲುವಾಗಿ 2016-17ನೇ ಸಾಲಿಗೆ ಆಯವ್ಯಯದಲ್ಲಿ ಒದಗಿಸಿರುವ ಅನುದಾನದಲ್ಲಿ ಮೊದಲ ಮೂರು ತಿಂಗಳ ಅವಧಿಗೆ ಸಹಾಯಾನುದಾನ ₹. 78.00 ಲಕ್ಷಗಳನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣಾ ಆಯೋಗಕ್ಕೆ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಪತ್ರ (2)ರಲ್ಲಿ ಕಾರ್ಯದರ್ಶಿ, ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದವರು ಕೋರಿರುತ್ತಾರೆ. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಕೋರಿಕೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 7 ಪಿಎಸ್‌ಆರ್ 2016/ಪಿ2 ಬೆಂಗಳೂರು, ದಿನಾಂಕ: 24-05-2016.**

1. ಸರ್ಕಾರವು, 2016-17ನೇ ಹಣಕಾಸು ವರ್ಷದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚಗಳ ಸಲುವಾಗಿ ಲೆಕ್ಕ ಶೀರ್ಷಿಕೆ **"2801-80-101-1-07-101 ಸಹಾಯಾನುದಾನ (ಯೋಜನೇತರ)"** ಯಡಿ ಒದಗಿಸಿರುವ ಅನುದಾನದಲ್ಲಿ ಮೊದಲ ತ್ರೈಮಾಸಿಕ ಕಂತಿನ ₹. 78.00 ಲಕ್ಷಗಳನ್ನು (ಎಪ್ಪತ್ತೆಂಟು ಲಕ್ಷ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 3 ಟಿಎಫ್‌ಪಿ 2016 ದಿನಾಂಕ: 02-04-2016ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R.456**

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** 2016–17ನೇ ಸಾಲಿಗೆ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್ ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004 ದಿನಾಂಕ: 15–03–2005.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ: 04–09–2008.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 25 ಪಿಎಸ್‌ಆರ್ 2016 ದಿನಾಂಕ: 07–05–2016.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 25 ಪಿಎಸ್‌ಆರ್ 2016/ಪಿ3 ದಿನಾಂಕ: 19–05–2016(TA)

**ಪ್ರಸ್ತಾವನೆ:–**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.

2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ: 01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.

3. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2016ರ ದರ ಆದೇಶದಲ್ಲಿ 2016–17ನೇ ಸಾಲಿಗೆ ₹. 8,837.81 ಕೋಟಿಗಳ ಸಹಾಯಧನವನ್ನು ನಿಗಧಿಪಡಿಸಿದೆ.

4. ವಿದ್ಯುತ್ ಸರಬರಾಜು ಕಂಪನಿಗಳು "ಭಾಗ್ಯಜ್ಯೋತಿ/ಕುಟೀರಜ್ಯೋತಿ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2016–17ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ–7ರ ಪುಟ ಸಂಖ್ಯೆ: 190ರಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ₹. 7,199.00 ಕೋಟಿಗಳನ್ನು ಒದಗಿಸಲಾಗಿದೆ.

5. 2016–17ನೇ ಸಾಲಿಗೆ ಆಯವ್ಯಯದಲ್ಲಿ ಒದಗಿಸಿರುವ ಸಹಾಯಧನ ₹. 7,199.00 ಕೋಟಿಗಳಲ್ಲಿ ಪ್ರತಿ ಮಾಹೆಯಾನ ₹. 420.00 ಕೋಟಿಗಳನ್ನು ನಗದಾಗಿ ಬಿಡುಗಡೆ ಮಾಡಲು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಎಫ್‌ಡಿ 170 ವೆಚ್ಚ–1/16 ದಿನಾಂಕ: 03–05–2016ರಲ್ಲಿ ಸಹಮತಿ ನೀಡಿದೆ.

6. ಮೇಲೆ ಓದಲಾದ ಕ್ರಮಾಂಕ–(4) ಮತ್ತು (5)ರಲ್ಲಿನ ಸರ್ಕಾರಿ ಆದೇಶಗಳ 2016–17ನೇ ಸಾಲಿಗೆ ಈವರೆವಿಗೆ ಸಹಾಯಧನ ₹. 520.00 ಕೋಟಿಗಳನ್ನು ಈ ಕೆಳಕಂಡಂತೆ ಬಿಡುಗಡೆ ಮಾಡಿದೆ.

₹. ಕೋಟಿಗಳು

| | |
|---|---|
| 2016–17ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹. 7199 ಕೋಟಿಗಳಲ್ಲಿ ನಗದು ರೂಪವಾಗಿ ನೀರಾವರಿ ಪಂಪುಸೆಟ್ಟು, ಭಾಗ್ಯಜ್ಯೋತಿ/ಕುಟೀರ ಜ್ಯೋತಿ ಸ್ಥಾವರಗಳ ಉಚಿತ ವಿದ್ಯುತ್ ಸರಬರಾಜಿಗಾಗಿ ಸಹಾಯಧನದ ಬಾಬ್ತು. | 420.00 |
| ತ್ರಿಪಕ್ಷೀಯ ಹೊಂದಾಣಿಕೆ– ಏಪ್ರಿಲ್ 2016ರ ಮಾಹೆಯವರೆಗೆ ವಿದ್ಯುತ್ ತೆರಿಗೆ ವಸೂಲಿ ಮತ್ತು ರಾಜಧನ ಬಾಬ್ತು. | 100.00 |
| **ಒಟ್ಟು** | **520.00** |

7. ಮೇ–2016ರ ಮಾಹೆಗೆ ಸಹಾಯಧನ ₹. 420 ಕೋಟಿಗಳನ್ನು ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

### ಸರ್ಕಾರಿ ಆದೇಶ ಸಂಖ್ಯೆ: ಇಎನ್ 25 ಪಿಎಸ್‌ಆರ್ 2016 ಬೆಂಗಳೂರು, ದಿನಾಂಕ: 31–05–2016

1. ಸರ್ಕಾರವು ಭಾಗ್ಯಜ್ಯೋತಿ/ ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ 2016–17ನೇ ಸಾಲಿನ ಮೇ 2016ರ ಮಾಹೆಗೆ ₹ 420.00 ಕೋಟಿಗಳ (₹ ನಾನೂರ ಇಪ್ಪತ್ತು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪಿನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106" (ಸಹಾಯಧನ) (ಯೋಜನೇತರ) ಅಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

₹ ಕೋಟಿಗಳಲ್ಲಿ

| ವಿದ್ಯುತ್ ಸರಬರಾಜು ಕಂಪನಿಗಳು | 10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯ ಜ್ಯೋತಿ/ ಕುಟೀರ ಜ್ಯೋತಿ ಸ್ಥಾವರಗಳಿಗೆ | 2016–17ರ ಮೇ–2016 ಮಾಹೆಗೆ ಬಿಡುಗಡೆ |
|---|---|---|---|
| ಬೆವಿಕಂ | 57.50 | 2.50 | 60.00 |
| ಮವಿಕಂ | 22.00 | 1.00 | 23.00 |
| ಹುವಿಕಂ | 173.50 | 4.50 | 178.00 |
| ಗುವಿಕಂ | 85.00 | 6.00 | 91.00 |
| ಚಾವಿಸನಿನಿ | 61.00 | 2.00 | 63.00 |
| ಹು.ಗ್ರಾ.ಸ.ಸಂ | 5.00 | 0.00 | 5.00 |
| **ಒಟ್ಟು** | **404.00** | **16.00** | **420.00** |

2. ಮೇಲಿನ ಕಂಡಿಕೆ 1ರಲ್ಲಿ ಬಿಡುಗಡೆ ಮಾಡಿರುವ ಸಹಾಯಧನ ಬಾಬ್ತನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಮರುಹಂಚಿಕೆ ಮಾಡಿ ಆದೇಶಿಸಿದೆ.

₹ ಕೋಟಿಗಳಲ್ಲಿ

| ವಿದ್ಯುತ್ ಸರಬರಾಜು ಕಂಪನಿಗಳು | ಮೇ–2016ರ ಮಾಹೆಗೆ ಸಹಾಯಧನ ಬಿಡುಗಡೆ | | | | |
|---|---|---|---|---|---|
| | ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ | | | ವಿದ್ಯುತ್ ಸರಬರಾಜು ಕಂಪನಿಗಳಿಗೆ | ಒಟ್ಟು |
| | ವಿಸಕಂಗಳ ಪರವಾಗಿ ಕವಿನಿನಿಗೆ ನೇರ ಬಿಡುಗಡೆ | ದಾಮೋದರ್ ವ್ಯಾಲಿ ಕಾರ್ಪೋರೇಷನ್‌ನ ವಿದ್ಯುತ್ ಬಾಬ್ತು ಪಿಜಿಸಿಎಲ್‌ಗೆ ವಿಸಕಂಗಳು ಪಾವತಿಸಬೇಕಾಗಿರುವ ಪ್ರಸರಣ ವೆಚ್ಚದ ಹೊಂದಾಣಿಕೆ ಬಿಡುಗಡೆ | ಒಟ್ಟು | | |
| ಬೆವಿಕಂ | 60.00 | 0.00 | **60.00** | 0.00 | **60.00** |
| ಮವಿಕಂ | 21.00 | 2.00 | **23.00** | 0.00 | **23.00** |
| ಹುವಿಕಂ | 124.00 | 6.00 | **130.00** | 48.00 | **178.00** |
| ಗುವಿಕಂ | 64.00 | 4.00 | **68.00** | 23.00 | **91.00** |
| ಚಾವಿಸನಿನಿ | 45.00 | 3.00 | **48.00** | 15.00 | **63.00** |
| ಹು.ಗ್ರಾ.ಸ.ಸಂ | 0.00 | 0.00 | **0.00** | 5.00 | **5.00** |
| **ಒಟ್ಟು** | **314.00** | **15.00** | **329.00** | **91.00** | **420.00** |

3. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಕೋರಿಕೆಯಂತೆ ದಾಮೋದರ್ ವ್ಯಾಲಿ ಕಾರ್ಪೋರೇಷನ್ ನಿಂದ ಖರೀದಿಸುತ್ತಿರುವ ವಿದ್ಯುತ್ ಬಾಬ್ತಿಗೆ ಸಂಬಂಧಿಸಿದಂತೆ ಪಿಜಿಸಿಎಲ್‌ಗೆ ಪಾವತಿಸಬೇಕಾಗಿರುವ ಪ್ರಸರಣ ವೆಚ್ಚವನ್ನು ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳ ಸಹಾಯಧನದಲ್ಲಿ ಕಡಿತಗೊಳಿಸಿ ಹೊಂದಾಣಿಕೆಯ ಮೂಲಕ ಆ ಮೊತ್ತವನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

4. ಹುಕ್ಕೇರಿ ಗ್ರಾಮೀಣ ಸಹಕಾರ ಸಂಘಕ್ಕೆ ಬಿಡುಗಡೆ ಮಾಡಿರುವ ಸಹಾಯಧನ ₹. 5.00 ಕೋಟಿಗಳನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಖರೀದಿ ಮಾಡಿರುವ ವಿದ್ಯುತ್ ಅಸಲು ವೆಚ್ಚದ ಬಾಬ್ತು ಹೊಂದಾಣಿಕೆ ಮೂಲಕ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ.

5. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ₹. 329.00 ಕೋಟಿಗಳನ್ನು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ₹. 53.00 ಕೋಟಿಗಳನ್ನು, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ₹. 23.00 ಕೋಟಿಗಳನ್ನು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ₹. 15.00 ಕೋಟಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

6. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತಿ ರಸೀದಿಯ ಮೇಲೆ ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

7. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

8. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.
9. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಸಹಾಯಧನ ಬೇಡಿಕೆಗಳನ್ನು ವಿಸಕಂಗಳಿಗೆ ಬಿಡುಗಡೆ ಮಾಡಿರುವ ಮೊತ್ತದ ಬಗ್ಗೆ ಮಹಾ ಲೇಖಪಾಲರಿಂದ ಪರಿಶೀಲಿಸಿ/ ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಎಫ್‌ಡಿ 170ವೆಚ್ಚ-1/16 ದಿನಾಂಕ 03-05-2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R.457**

**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ:** 2016-17ನೇ ಸಾಲಿನಲ್ಲಿ ವಿದ್ಯುತ್ ಕ್ಷೇತ್ರದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. 2016-17ನೇ ಸಾಲಿನ ಆಯವ್ಯಯ.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 27 ಪಿಎಸ್‌ಆರ್ 2016/ಪಿ1 ದಿನಾಂಕ: 16-05-2016.
3. ಬೆವಿಕಂ ಇ-ಮೇಲ್ ದಿನಾಂಕ: 20-05-2016.
4. ಮವಿಕಂ ಇ- ಮೇಲ್ ದಿನಾಂಕ: 18-05-2016.
5. ಹುವಿಕಂ ಇ- ಮೇಲ್ ದಿನಾಂಕ: 12-05-2016.
6. ಗುವಿಕಂ ಪತ್ರ ಸಂಖ್ಯೆ: 8188-92, ದಿನಾಂಕ: 23-05-2016.
7. ಚಾವಿಸನಿನಿ ಇ- ಮೇಲ್ ದಿನಾಂಕ: 18-05-2016.

**ಪ್ರಸ್ತಾವನೆ:-**

1. ಮೇಲಿನ ಕ್ರಮ ಸಂಖ್ಯೆ 1ರಲ್ಲಿ ಓದಲಾದ 2016-17ನೇ ಸಾಲಿನ ಆಯವ್ಯಯದಲ್ಲಿ ಇಂಧನ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ, ಲೆಕ್ಕಶೀರ್ಷಿಕೆ 4801-01-190-0-09-211 (ಯೋಜನೆ)ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆಗಾಗಿ ₹. 587.14 ಕೋಟಿಗಳನ್ನು, ಲೆಕ್ಕಶೀರ್ಷಿಕೆ 4801-01-190-0-09-422 (ಯೋಜನೆ)ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ ಪರಿಶಿಷ್ಟ ಜಾತಿ ಉಪಯೋಜನೆಗಾಗಿ ₹. 104.44 ಕೋಟಿಗಳನ್ನು ಮತ್ತು ಲೆಕ್ಕಶೀರ್ಷಿಕೆ 4801-01-190-0-09-423 (ಯೋಜನೆ)ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ ಗಿರಿಜನ ಉಪಯೋಜನೆಗಾಗಿ ₹. 35.42 ಕೋಟಿಗಳು ಸೇರಿದಂತೆ ಒಟ್ಟಾರೆ ₹. 727.00 ಕೋಟಿಗಳ ಬಂಡವಾಳ ಒದಗಿಸಲಾಗಿದೆ.
2. ಮೇಲಿನ ಕ್ರಮ ಸಂಖ್ಯೆ: 2ರಲ್ಲಿ ಓದಲಾದ ಆದೇಶದ ಪ್ರಕಾರ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4)ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಖಜಾನೆಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ವಿನಾಯಿತಿ ನೀಡಿ ಆದೇಶಿಸಲಾಗಿದೆ.
3. 2016-17ನೇ ಸಾಲಿನಲ್ಲಿ ವಿದ್ಯುತ್ ಸರಬರಾಜು ಕಂಪನಿಗಳು ಈ ಕೆಳಕಂಡ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗುವುದೆಂದು ಮೇಲಿನ ಕ್ರಮ ಸಂಖ್ಯೆ 3 ರಿಂದ 7 ರಲ್ಲಿ ಓದಲಾದ ಪತ್ರಗಳಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

(₹. ಕೋಟಿಗಳಲ್ಲಿ)

| ವಿಸಕಂಗಳು | ಕಾಮಗಾರಿಯ ವಿವರಗಳು | ಯೋಜನೆಯ ವೆಚ್ಚ |
|---|---|---|
| ಬೆವಿಕಂ | 11 KV Evacuation/Link line, Additional DTC/Enhancement of TC, HT reconductoring & LT reconductoring | 50.72 |
| ಮವಿಕಂ | Establishing New stations, providing Additional power Transformers & Augmentation of Existing Power Transformer. | 52.41 |
| ಹುವಿಕಂ | Additional Distribution Transformers, HT reconductoring LT reconductoring and System improvement works. | 50.93 |
| ಗುವಿಕಂ | Additional Distribution Transformers, LT reconductoring, Establishing New stations & Replacement of existing EM by Static Meter | 50.00 |
| ಚಾವಿಸನಿನಿ | Supply & Erection of DCUs for Substations, Modems for already metered DTCs in rural areas, Modems for DTC for which metering is proposed under DDUGJY in rural areas and System improvement works. | 55.50 |
| | **ಒಟ್ಟು** | **259.56** |

4. ವಿದ್ಯುತ್ ಸರಬರಾಜು ಕಂಪನಿಗಳ ಮನವಿಗಳನ್ನು ಪುರಸ್ಕರಿಸಿ, ಒಟ್ಟಾರೆ ₹. 145.00 ಕೋಟಿಗಳು ಈಕ್ವಿಟಿ ಬಂಡವಾಳವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 27 ಪಿಎಸ್‌ಆರ್ 2016, ಬೆಂಗಳೂರು, ದಿನಾಂಕ: 31–05–2016.**

1. 2016–17ನೇ ಸಾಲಿಗೆ ಸರ್ಕಾರವು ವಿದ್ಯುತ್ ಸರಬರಾಜು ಕಂಪನಿಗಳಿಗೆ ₹. 145.00 ಕೋಟಿಗಳನ್ನು (₹. ನೂರ ನಲವತ್ತೈದು ಕೋಟಿಗಳು ಮಾತ್ರ) ವಿದ್ಯುತ್ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಲೆಕ್ಕ ಶೀರ್ಷಿಕೆ "4801–01–190–0–09–211 Inverstment in Power Utilities (ಯೋಜನೆ)"ಯಡಿ ಕೆಳಕಂಡ ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ

| ವಿಸಕಂಗಳು | ಯೋಜನೆಯ ವೆಚ್ಚ |
|---|---|
| ಬೆವಿಕಂ | 35.00 |
| ಮವಿಕಂ | 15.00 |
| ಹುವಿಕಂ | 35.00 |
| ಗುವಿಕಂ | 30.00 |
| ಚಾವಿಸನಿನಿ | 30.00 |
| **ಒಟ್ಟು** | **145.00** |

2. ವಿದ್ಯುತ್ ಸರಬರಾಜು ಕಂಪನಿಗಳು ಮೇಲಿನ ಕೋಷ್ಟಕದಲ್ಲಿ ಬಿಡುಗಡೆ ಮಾಡಿರುವ ಮೊತ್ತಕ್ಕೆ ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆರವರ ಮೇಲು ರುಜುವನ್ನು ಹಣ ಸ್ವೀಕೃತ ರಸೀದಿ (Payee's receipts) ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಬಂಡವಾಳ (Equity) ವನ್ನು ಮೇಲಿನ ಕೋಷ್ಟಕದಲ್ಲಿ ನಮೂದಿಸಿರುವ ಕಾಮಗಾರಿಗಳಲ್ಲಿ ಹೂಡಿರುವ ಬಗ್ಗೆ ಮುಂದೆ ಆರ್ಥಿಕ ಮತ್ತು ಭೌತಿಕ ಪ್ರಗತಿ ಸಲ್ಲಿಸುವುದು. ಬಿಡುಗಡೆಯಾದ ಬಂಡವಾಳದ ಬಳಕೆಯ ಬಗ್ಗೆ ಬಳಕೆಯ ಪ್ರಮಾಣ ಪತ್ರ (Utilization Cerificate) ವನ್ನು ಸರ್ಕಾರಕ್ಕೆ ಒದಗಿಸುವುದು.
4. ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5. ಮಹಾಲೇಖಪಾಲರಿಂದ ಪಡೆದುಕೊಳ್ಳಬೇಕಾಗಿರುವ ಅನುಮೋದನೆಗೆ ವಿನಾಯಿತಿಯನ್ನು ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಇಎನ್ 27 ಪಿಎಸ್‌ಆರ್ 2016/ಪಿ1 ದಿನಾಂಕ: 16–05–2016ರಲ್ಲಿ ನೀಡಿದೆ.
6. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 3 ಟಿಎಫ್‌ಪಿ 2016, ಬೆಂಗಳೂರು ದಿನಾಂಕ: 02–04–2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R.458**

**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್‌ಆರ್ 2002 ದಿನಾಂಕ: 31–05–2002.
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್‌ಆರ್ 2002 ದಿನಾಂಕ: 19–12–2002.
3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 3 ಟಿಎಫ್‌ಪಿ 2016 ದಿನಾಂಕ: 02–04–2016.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 26 ಪಿಎಸ್‌ಆರ್ 2016 ದಿನಾಂಕ: 26–04–2016 ಮತ್ತು 18–05–2016.
5. ಕವಿಪ್ರನಿನಿ ಮತ್ತು ವಿಸಂಕಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ರವರ ಪತ್ರ ಸಂಖ್ಯೆ: ಕೆಇಪಿಜಿಟಿ/ಕೆಸಿಜಿ 123/ಪಿ14/2016–17/313–17 ದಿನಾಂಕ: 25–05–2016.

**ಪ್ರಸ್ತಾವನೆ:–**

1. ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು

ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದಂತೆ ನಿಧಿ ಸಂಗ್ರಹಣೆ ಮಾಡಿದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.

2. ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.

3. 2016–17ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ₹. 550.00 ಕೋಟಿಗಳನ್ನು ಒದಗಿಸಲಾಗಿರುತ್ತದೆ. ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಈವರೆಗೆ ₹. 91.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

4. ಮೇಲೆ (5) ರಲ್ಲಿ ಓದಲಾದ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ರವರು ಪತ್ರದಲ್ಲಿ ಜೂನ್ 2016ರ ಮಾಹೆಗೆ ಪಿಂಚಣಿ ಮತ್ತು ಉಪದಾನ ವಂತಿಕೆ ₹. 77.00 ಕೋಟಿಗಳನ್ನು ಬಿಡುಗಡೆ ಮಾಡಲು ಕೋರಿದ್ದಾರೆ.

5. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2016–17ನೇ ಸಾಲಿನ ಜೂನ್ 2016ರ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ₹. 46.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 26 ಪಿಎಸ್ಆರ್ 2016, ಬೆಂಗಳೂರು, ದಿನಾಂಕ: 06–06–2016.**

1. ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2016–17ನೇ ಸಾಲಿನ ಜೂನ್ 2016ರ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ₹. 46.00 ಕೋಟಿ (₹. ನಲವತ್ತಾರು ಕೋಟಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate) ನ್ನು ಸಲ್ಲಿಸತಕ್ಕದ್ದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ FD 3 TFP 2016 ದಿನಾಂಕ: 02–04–2016ರಲ್ಲಿ ಅಪರ ಮುಖ್ಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R.259**

**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ:** ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ ವೈಟ್‌ಫಿಲ್ಡ್ ಬೆಂಗಳೂರು ಇವರಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವ ಸಂಬಂಧ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಡಿಇ 51 ಇಇಬಿ 2001 ದಿನಾಂಕ: 27–04–2001.
2. ಸರ್ಕಾರದ ಆದೇಶ ಸಂಖ್ಯೆ ಇಎನ್ 60 ಇಇಬಿ 2009 ದಿನಾಂಕ: 31–03–2010.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 25 ಪಿಎಸ್ಆರ್ 2016 ದಿನಾಂಕ: 07–05–2016. ಮತ್ತು 31–05–2016.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 25 ಪಿಎಸ್ಆರ್ 2016/ಪಿ3 ದಿನಾಂಕ: 19–05–2016 (TA).
5. ಬೆಸ್ಕಾಂನ ಪತ್ರ ಸಂಖ್ಯೆ: ಪ್ರವ್ಯ(ಕಂ)/ಸಪ್ರವ್ಯ–2/ಬಿಸಿ–22/2224/16–17/445–48, ದಿನಾಂಕ: 01–06–2016.

**ಪ್ರಸ್ತಾವನೆ:–**

1. ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ, ವೈಟ್ ಫೀಲ್ಡ್, ಬೆಂಗಳೂರು ಇವರಿಗೆ ವಿದ್ಯುತ್ ಬಳಕೆ ಸಂಬಂಧ ಪ್ರತಿ ವರ್ಷ ಗರಿಷ್ಠ ಮೊತ್ತ ₹. 2.00 ಕೋಟಿಗಳ ಸಹಾಯಧನವನ್ನು ಲೆಕ್ಕಶೀರ್ಷಿಕೆ "2801–80–101–1–04–106ರಡಿ ಭರಿಸಲು ಸರ್ಕಾರವು ಮೇಲೆ ಓದಲಾದ ಕ್ರಮಾಂಕ(1)ರ ಆದೇಶದಲ್ಲಿ ಅನುಮೋದನೆ ನೀಡಿದೆ.

2. ಮೇಲೆ ಓದಲಾದ ಕ್ರಮಾಂಕ (2)ರಲ್ಲಿ ಸರ್ಕಾರವು ಆದೇಶ ಸಂಖ್ಯೆ: ಇಂಇ 51 ಇಇಬಿ 2001 ದಿನಾಂಕ: 27–04–2001ನ್ನು ಭಾಗಶಃ ಮಾರ್ಪಡಿಸಿ ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ಸಂಸ್ಥೆ, ವೈಟ್ ಫೀಲ್ಡ್, ಬೆಂಗಳೂರು ಜೊತೆಗೆ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ, ಬೆಂಗಳೂರು ಇವರ ವಿದ್ಯುತ್ ಬಳಕೆಗೆ ತಗಲುವ ಮೊತ್ತವನ್ನು ವಾರ್ಷಿಕ ಗರಿಷ್ಠ ₹. 2.00 ಕೋಟಿಗಳಿಗೆ (ಎರಡು ಕೋಟಿ ರೂಪಾಯಿಗಳು ಮಾತ್ರ) ಸೀಮಿತಗೊಳಿಸಿ ಸರ್ಕಾರವು ಸಹಾಯಧನವನ್ನು ನೀಡಲು ಅನುಮೋದಿಸಿದೆ.

3. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2016–17ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳ ಸಂಪುಟ–7ರ ಪುಟ ಸಂಖ್ಯೆ–190ರಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ₹. 7,199.00 ಕೋಟಿಗಳನ್ನು ಒದಗಿಸಲಾಗಿದೆ.

4. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 170 ವೆಚ್ಚ–1/16 ದಿನಾಂಕ 03–05–2016ರಲ್ಲಿ ಲೆಕ್ಕಶೀರ್ಷಿಕೆ 2801–80–101–1–04–106 ರಡಿಯಲ್ಲಿ ಒದಗಿಸಿರುವ ₹. 7,199.00 ಕೋಟಿಗಳಲ್ಲಿ ₹. 2.00 ಕೋಟಿಗಳನ್ನು ಸತ್ಯಸಾಯಿ ಸಂಸ್ಥೆಗಳ ವಿದ್ಯುತ್ ಬಳಕೆಯ ವೆಚ್ಚ ಭರಿಸಲು ಸಹಾಯಧನ ನೀಡಲು ಸಹಮತಿಸಿದೆ.

5. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(3) ಮತ್ತು (4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ಒಟ್ಟು ₹. 940.00 ಕೋಟಿಗಳನ್ನು ಇವರೆವಿಗೂ ಬಿಡುಗಡೆ ಮಾಡಿದೆ. ಬಾಕಿ ಉಳಿದಿರುವ ₹. 6,259.00 ಕೋಟಿಗಳಲ್ಲಿ ₹. 2.00 ಕೋಟಿಗಳನ್ನು ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ಸಂಸ್ಥೆ, ವೈಟ್ ಫೀಲ್ಡ್, ಬೆಂಗಳೂರು ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ಪ್ರಸ್ತಾಪಿಸಿದೆ.

6. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ಅಸ ಪತ್ರ ಸಂಖ್ಯೆ: ಪ್ರವ್ಯ(ಕಂ)/ಸಪ್ರವ್ಯ–2/ಬಿಸಿ–22/2224/16–17/445–48 ದಿನಾಂಕ: 01–06–2016ರಲ್ಲಿ ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ವೈಟ್ ಫೀಲ್ಡ್, ಬೆಂಗಳೂರು, ರವರ ವಿದ್ಯುತ್ ಸ್ಥಾವರ ಸಂಖ್ಯೆ: ಇ4ಹೆಚ್‌ಟಿ–183 ಮತ್ತು ಶ್ರೀ ಸತ್ಯ ಸಾಯಿ ಜನರಲ್ ಆಸ್ಪತ್ರೆ ವೈಟ್ ಫೀಲ್ಡ್‌ರವರ ವಿದ್ಯುತ್ ಸ್ಥಾವರ ಸಂಖ್ಯೆ: ಇ4ಹೆಚ್‌ಟಿ–209 ಗಳ ವಿದ್ಯುತ್ ಬಳಕೆ ವೆಚ್ಚ ಭರಿಸಲು ₹. 2.00 ಕೋಟಿಗಳ ಸಹಾಯಧನವನ್ನು 2016–17ನೇ ಸಾಲಿಗೆ ಬಿಡುಗಡೆ ಮಾಡುವಂತೆ ಕೋರಿದೆ.

7. ಸರ್ಕಾರದ ಆದೇಶಗಳು ಹಾಗೂ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಮನವಿಯನ್ನು ಪರಿಗಣಿಸಿ ಸತ್ಯಸಾಯಿ ಸಂಸ್ಥೆಗಳ 2016–17ನೇ ಸಾಲಿನ ವಾರ್ಷಿಕ ಸಹಾಯಧನ ಭರಿಸಲು ₹. 2.00 ಕೋಟಿಗಳಿಗೆ ಮಿತಿಗೊಳಿಸಿ ಸಹಾಯಧನ ಒದಗಿಸಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 37 ಪಿಎಸ್‌ಆರ್ 2016, ಬೆಂಗಳೂರು, ದಿನಾಂಕ: 06–06–2016.**

1. ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ವೈಟ್ ಫೀಲ್ಡ್, ಬೆಂಗಳೂರು ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ ವೈಟ್ ಫೀಲ್ಡ್, ಬೆಂಗಳೂರು ಈ ಸಂಸ್ಥೆಗಳ ವಿದ್ಯುತ್ ವೆಚ್ಚ ಭರಿಸಲು 2016–17ನೇ ಸಾಲಿನ ವಾರ್ಷಿಕ ಸಹಾಯಧನ ₹. 2.00 ಕೋಟಿ (ಎರಡು ಕೋಟಿ ರೂಪಾಯಿಗಳು ಮಾತ್ರ)ಗಳನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಸಹಾಯಧನದ ರೂಪದಲ್ಲಿ ಲೆಕ್ಕಶೀರ್ಷಿಕೆ 2801–80–101–1–04–106 (ಯೋಜನೇತರ) ರಡಿಯಲ್ಲಿ ಬಿಡುಗಡೆ ಮಾಡಿ ಆದೇಶಿಸಿದೆ.

2. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಹಣ ಸ್ವೀಕೃತಿ ರಸೀದಿಯ (Payees Receipt) ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ, ಇವರ ಮೇಲು ರುಜುವನ್ನು ಪಡೆದು ಹಣ ಪಡೆಯತಕ್ಕದ್ದು ಹಾಗೂ ಈ ಮೊತ್ತವನ್ನು ಸರಿಯಾದ ಲೆಕ್ಕ ತಃಖ್ತೆಯಡಿ ಲೆಕ್ಕೀಕರಿಸುವುದು.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 170 ವೆಚ್ಚ–1/16 ದಿನಾಂಕ: 03–05–016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

P.R460

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** ರಾಜ್ಯದಲ್ಲಿ ಉದ್ಭವಿಸಿರುವ ತೀವ್ರ ಬರ ಪರಿಸ್ಥಿತಿ ಪರಿಣಾಮವಾಗಿ ರಾಜ್ಯದ ಸಹಕಾರ ಸಂಸ್ಥೆಗಳ ಮೂಲಕ ಸಾಲ ಪಡೆದು ದಿನಾಂಕ: 30–09–2016 ಕ್ಕೆ ಸುಸ್ತಿಯಾಗಿರುವ ಅಲ್ಪಾವಧಿ, ಮಧ್ಯಮಾವಧಿ ಹಾಗೂ ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲಗಳ ಮೇಲಿನ ಬಡ್ಡಿಯನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಒ 358 ಸಿಎಲ್‌ಎಸ್ 2015, ದಿನಾಂಕ: 20–10–2015.

2) ಸರ್ಕಾರದ ಆದೇಶ ಸಂಖ್ಯೆ: ಸಿಒ 358 ಸಿಎಲ್‌ಎಸ್ 2015, ದಿನಾಂಕ: 07–04–2016.

3) ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು) ಇವರ ಪತ್ರ ಸಂಖ್ಯೆ: ಸಿಆರ್‌ಡಿ/ ಸಿಎಡಿ–1/71/2015–16, ದಿನಾಂಕ: 27–05–2016.

**ಪ್ರಸ್ತಾವನೆ:–**

ಮೇಲೆ ಓದಲಾದ(1)ರ ಸರ್ಕಾರದ ಆದೇಶದಲ್ಲಿ ರೈತರು ರಾಜ್ಯದ ಸಹಕಾರ ಸಂಘಗಳು ಅಂದರೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳು, ಲ್ಯಾಂಪ್ಸ್ ಸಹಕಾರ ಸಂಘಗಳು ಮತ್ತು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳಿಂದ ಸಾಲ ಪಡೆದು ದಿನಾಂಕ: 30–09–2015ಕ್ಕೆ ಸುಸ್ತಿಯಾಗಿರುವ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲಗಳ ಕಂತುಗಳ ಅಸಲನ್ನು ದಿನಾಂಕ: 31–03–2016ರೊಳಗೆ ಸಂಬಂಧಪಟ್ಟ ಪತ್ತಿನ ಸಹಕಾರ ಸಂಘ/ಬ್ಯಾಂಕುಗಳಿಗೆ ಪೂರ್ತಿಯಾಗಿ ಮರುಪಾವತಿಸಿದಲ್ಲಿ ಈ ಮೊತ್ತಗಳಿಗೆ ಬಾಕಿ ಇರುವ ಬಡ್ಡಿಯನ್ನು ಮನ್ನಾ ಮಾಡಲು ಆದೇಶ ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ (2) ರ ಆದೇಶದಲ್ಲಿ ಸಾಲಗಳ ಕಂತುಗಳ ಅಸಲನ್ನು ಮರುಪಾವತಿಸಲು ನಿಗಧಿಪಡಿಸಲಾದ ಗಡುವು ದಿನಾಂಕವನ್ನು 31–03–2016ರಿಂದ 30–09–2016ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ (3) ರ ಸಹಕಾರ ಸಂಘಗಳ ನಿಬಂಧಕರ ಪತ್ರದಲ್ಲಿ ಸೆಪ್ಟೆಂಬರ್ 2016ರ ಅಂತ್ಯಕ್ಕೆ ಸುಸ್ತಿ ಸಾಲಗಳ ವಸೂಲಾತಿಗೆ ಅಂತಿಮ ಗಡುವನ್ನು ವಿಸ್ತರಿಸಿರುವುದರಿಂದ, ಈ ಅವಧಿಯ ಬಿಲ್ಲುಗಳಿಗೆ ಹೆಚ್ಚುವರಿ ಆಯವ್ಯಯದ ಅವಶ್ಯಕತೆ ಇರುತ್ತದೆ. ಹೆಚ್ಚುವರಿ ಆಯವ್ಯಯ ಅವಕಾಶ ಕಲ್ಪಿಸಲು ಪ್ರಸ್ತಾವನೆ ಕೋರುವ ಮೊದಲು ಸದ್ಯ ಅವಕಾಶ ಕಲ್ಪಿಸಿರುವ ಪೂರ್ಣ ಮೊತ್ತವನ್ನು ಬಳಕೆ ಮಾಡಿಕೊಳ್ಳಬಹುದಾಗಿರುವುದರಿಂದ ಸದ್ಯ ಸ್ವೀಕೃತವಾಗಿರುವ ₹. 3001.47 ಲಕ್ಷಗಳ ಬಿಲ್ಲುಗಳಿಗೆ ಪೂರ್ಣವಾಗಿ ಅನುದಾನ ಬಿಡುಗಡೆ ಮಾಡಲು ಅನುಕೂಲವಾಗುವಂತೆ ಆಡಳಿತಾತ್ಮಕ ಅನುಮೋದನೆ ನೀಡಿ ಅನುದಾನ ಬಿಡುಗಡೆ ಮಾಡಲು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 383 ಸಿಎಲ್‌ಎಸ್ 2016, ಬೆಂಗಳೂರು, ದಿನಾಂಕ: 01-07-2016.**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸೆಪ್ಟೆಂಬರ್ 2016 ರ ಅಂತ್ಯಕ್ಕೆ ಸುಸ್ತಿ ಸಾಲಗಳ ವಸೂಲಾತಿಗೆ ಅಂತಿಮ ಗಡುವನ್ನು ವಿಸ್ತರಿಸಿರುವುದರಿಂದ, ಸುಸ್ತಿ ಸಾಲ ಬಡ್ಡಿ ಮನ್ನಾ ಯೋಜನೆಯಡಿ ಲೆಕ್ಕ ಶೀರ್ಷಿಕೆ 2425-00-107-2-54 ರಡಿ ₹. 30.01 ಕೋಟಿಗಳ (ಮೂವತ್ತು ಕೋಟಿ ಒಂದು ಲಕ್ಷ ರೂಪಾಯಿಗಳು ಮಾತ್ರ) ಅನುದಾನ ಬಿಡುಗಡೆ ಮಾಡಲು ಆದೇಶ ಹೊರಡಿಸಿದೆ.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ನಿಬಂಧಕರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ. ಈ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 118 ವೆಚ್ಚ-2/2016, ದಿನಾಂಕ: 29-06-2016 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಧಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ-3

ಸಹಕಾರ ಇಲಾಖೆ.

**P.R.461**

**SC-250**

## FINANCE SECRETARIAT.

**Subject:** Provision for Price Adjustment for Specified Materials for works- Clarification-reg

Read:
1. G.O. No. FD 59 PRO CELL 2004, dated : 26-11-2004.
2. G.O. No. FD 3 PCL 2008, dated : 21-11-2008.

**PREAMBLE:**

In Government Order reference at (1) above the instructions regarding Price Adjustment methods applicable were specified Clarification are being sought on the method of computing Price Ajustment, whenever the contract period is extended due to lapse of part of the contractor and also when the contract period is extended due to no fault of the contractor. The rationale behind admissibility of Price Adjustment is to compensate the contractor on price fluctuations when extensions of time is given beyond the stipulated date of completion of reasons not attributable to the contractor. However while extending such benefits it should be ensured that this will not result either in additional financial burden to government or result in undue benefit to the Contractor. Therefore after examining all aspects Government issues the following orders.

**GOVERNMENT ORDER NO.791 EXP-12/2015, BENGALURU, DATED: 26/02/2016.**

In the circumstances explained in the preamble and in partial modification of the Government Order referred at (2) above, the following method, of price adjustment is applicable.

**Case-1, When time extension is granted for the reasons not attiributable to the contractor.**

Price Adjustment is admissible as per terms of contract for the work carried out during the extension of the time granted for completion of work.

**Case-2, When the time extension is granted for the reasons not attiributable to the contractor.**

Price Adjustment is admissible upto the original contract period only and for the period of extension, price adjustment is not admissible and payment for such extension shall be at tendered rates only.

**Case-3, When extension of time is granted for the reasons not attiributable to to employer followed by reasons attributable to the contractor.**

Price Adjustment is admissible as per terms of contract for the work carried out during the original period of completion and during the extension of time granted for completion of work for reasons attributable to employer. For the work carried out during the extension of time granted due to delay attributable to the contractor Price Adjustment is not admissible and the contractor shall be paid only at the Tendered rates.

**Case-4, When delay occurs initially attributable to contractor and later attributable to Employer.**

Extension of time in such cases is to be granted by first appending extension of time due to delay by employer to the original contract period, although the delay is initially due to contractor and later by the employer. The extension of time granted due to delay by the by the contractor shall be considered as the last phase after extension due to delay by employer is added to the original contract period.

Price Adjustment is adimissible to the delay attributable to the employer. The Price Adjustment for the initial delay attributable to the contractor is not admissible and the contractor shal be paid only at the Tendered rates.

**General Clarifications:**

**I-By way of abundant caution, it is also clarified that quarter in this G.O. and G.O at reference (1) and (2) above means a period of three consecutive months as detailed below:**

(i)For reckoning the average base price index

Three consecutive calendar months preceding the calender month of opening the Tender.

(ii) For reckoning the value of 'R'

Three consecutive Calendar months including the calendar month in which work was started in the first instance and thereafter next quarter shall be consecutive three months following the preceding quarter.

II- The Value or R defined in Government order referred at (1) above is redefined as below:

R= Total value or work done during the quarter. It would include the amount of secured advance for materials paid for (if any) during the quarter, less the amount of the secured advance recovered during the quarter. It will exclude value for works executed under variations for which Price Adjustment (if any) will be worked out separately based on the terms matually agreed. It wil also exclude the value of work done during the quarter which was programmed to be done prior to this quarter as per the work schedule in the agreement.

By Order and Name in the Government of the Karnataka

**K. Nandakumar**

Special Officer and Ex-officio

Deputy Secretary to Government

Finance Department (PWFC)

**P.R. 462**

**S.C. 500**

## ಸಹಕಾರ ಸಚಿವಾಲಯ

**ವಿಷಯ:** 2014–15ನೇ ಸಾಲಿನಲ್ಲಿ ಚುನಾವಣೆ ನಡೆದ ಸಹಕಾರ ಸಂಘಗಳಲ್ಲಿ ಸದಸ್ಯರಾಗಿದ್ದ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಸದಸ್ಯರು ಸಂಘದ ಉಪ ನಿಯಮದ ತಿದ್ದುಪಡಿಯಿಂದ ಹೆಚ್ಚುವರಿ ಷೇರು ಮೊತ್ತವನ್ನು ಪಾವತಿಸದ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಸದಸ್ಯರ ವ್ಯತ್ಯಾಸದ ಷೇರು ಮೊತ್ತವನ್ನು ಸಹಕಾರ ಸಂಘಗಳಿಗೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಓಟಿಎಸ್–2/484/ಪಿಎಲ್ಎನ್/2016–17, ದಿನಾಂಕ: 23–04–2016.

**ಪ್ರಸ್ತಾವನೆ:–**

2016–17ನೇ ಸಾಲಿನ ಆಯವ್ಯಯದಲ್ಲಿ 2014–15ನೇ ಸಾಲಿನಲ್ಲಿ ಚುನಾವಣೆ ನಡೆದ ಸಹಕಾರ ಸಂಘಗಳಲ್ಲಿ ಸದಸ್ಯರಾಗಿದ್ದ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಸದಸ್ಯರು ಸಂಘದ ಉಪ ನಿಯಮದ ತಿದ್ದುಪಡಿಯಿಂದ ಹೆಚ್ಚುವರಿ ಷೇರು ಮೊತ್ತವನ್ನು ಪಾವತಿಸದ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಸದಸ್ಯರ ವ್ಯತ್ಯಾಸದ ಷೇರು ಮೊತ್ತವನ್ನು ಸಹಕಾರ ಸಂಘಗಳಿಗೆ ಮಂಜೂರು ಮಾಡಲು ₹.986.00 ಲಕ್ಷಗಳ ಅವಕಾಶ ಕಲ್ಪಿಸಲಾಗಿರುತ್ತದೆ.

ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2016–17ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ 2014–15ನೇ ಸಾಲಿನಲ್ಲಿ ಚುನಾವಣೆ ನಡೆದ ಸಹಕಾರ ಸಂಘಗಳಲ್ಲಿ ಸದಸ್ಯರಾಗಿದ್ದ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಸದಸ್ಯರು ಸಂಘದ ಉಪ ನಿಯಮದ ತಿದ್ದುಪಡಿಯಿಂದ ಹೆಚ್ಚುವರಿ ಷೇರು ಮೊತ್ತವನ್ನು ಪಾವತಿಸದ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಸದಸ್ಯರ ವ್ಯತ್ಯಾಸದ ಷೇರು ಮೊತ್ತವನ್ನು ಸಹಕಾರ ಸಂಘಗಳಿಗೆ ಮಂಜೂರು ಮಾಡಲು ಆಯವ್ಯಯದಲ್ಲಿ ಕಲ್ಪಿಸಲಾದ ₹.986.00 ಲಕ್ಷಗಳ ಹಾಗೂ ಬಳಕೆಯಾಗದ ₹.17.00 ಲಕ್ಷಗಳನ್ನು ಸೇರಿಸಿ ಒಟ್ಟು ₹.1003.00 ಲಕ್ಷಗಳನ್ನು ಸಹಕಾರ ಸಂಘಗಳಿಗೆ ಮಂಜೂರು ಮಾಡುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 258 ಸಿಎಲ್ಎಸ್ 2016, ದಿನಾಂಕ: 01–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, 2016–17ನೇ ಸಾಲಿನ ಆಯವ್ಯಯದಲ್ಲಿ 2014–15ನೇ ಸಾಲಿನಲ್ಲಿ ಚುನಾವಣೆ ನಡೆದ ಸಹಕಾರ ಸಂಘಗಳಲ್ಲಿ ಸದಸ್ಯರಾಗಿದ್ದ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಸದಸ್ಯರು ಸಂಘಗಳ ಉಪ ನಿಯಮಗಳ ತಿದ್ದುಪಡಿ ಮಾಡಿ ಷೇರು ಮೊತ್ತವನ್ನು ಹೆಚ್ಚಿಸಲಾದ ಸಂಸ್ಥೆಗಳಲ್ಲಿ ಷೇರು ಮೊತ್ತವನ್ನು ಪಾವತಿಸದ ಅಂತಹ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಸದಸ್ಯರ ವ್ಯತ್ಯಾಸದ ಷೇರು ಮೊತ್ತವನ್ನು ಸರ್ಕಾರವೇ ಭರಿಸಿ ಸಹಕಾರ ಸಂಘಗಳಿಗೆ ಮಂಜೂರು ಮಾಡಲು 2016–17ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2425–00–108–0–58 ರಡಿಯಲ್ಲಿ ಒದಗಿಸಲಾಗಿರುವ ₹. 983.00 ಲಕ್ಷಗಳು ಹಾಗೂ ಲೆಕ್ಕ ಶೀರ್ಷಿಕೆ 2425–00–001–0–03ರಡಿ ಬಳಕೆಯಾಗದ ₹. 17.00 ಲಕ್ಷಗಳು ಸೇರಿ ಒಟ್ಟು ₹. 1003.00 ಲಕ್ಷಗಳ ಅನುದಾನವನ್ನು ಈ ಕೆಳಕಂಡಂತೆ ವಿಂಗಡಿಸಿ ಷರತ್ತು/ ಮಾನದಂಡಗಳನ್ವಯ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ:–

**ಲೆಕ್ಕ ಶೀರ್ಷಿಕೆ: 2425–00–108–0–58**

(₹. ಲಕ್ಷಗಳಲ್ಲಿ)

| | |
|---|---|
| 422–ವಿಶೇಷ ಘಟಕ ಯೋಜನೆ | 621.00 |
| 423–ಗಿರಿಜನ ಉಪ ಯೋಜನೆ | 365.00 |
| **ಒಟ್ಟು** | **986.00** |

**ಲೆಕ್ಕ ಶೀರ್ಷಿಕೆ: 2425–00–001–0–03**

| | |
|---|---|
| 422–ವಿಶೇಷ ಘಟಕ ಯೋಜನೆ | 16.00 |
| 423–ಗಿರಿಜನ ಉಪ ಯೋಜನೆ | 1.00 |
| **ಒಟ್ಟು** | **17.00** |

**ಷರತ್ತುಗಳು:–**

1. ಈ ಯೋಜನೆಯು 2014–15ನೇ ಸಾಲಿನಲ್ಲಿ ಚುನಾವಣೆ ನಡೆದ ಸಹಕಾರ ಸಂಘಗಳಲ್ಲಿ ಸದಸ್ಯರಾಗಿದ್ದು ಸಂಘಗಳ ಉಪ ನಿಯಮಗಳ ತಿದ್ದುಪಡಿಯ ಮೂಲಕ ಷೇರು ಮೊತ್ತವನ್ನು ಹೆಚ್ಚಿಸಲಾದ ಸಂಘಗಳಲ್ಲಿ ವ್ಯತ್ಯಾಸದ ಷೇರು ಮೊತ್ತವನ್ನು ಪಾವತಿಸದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರಿಗೆ ಮಾತ್ರ ಈ ಮೊತ್ತವನ್ನು ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿದೆ.
2. ಈ ಯೋಜನೆಯು 2014–15ನೇ ಸಾಲಿನಲ್ಲಿ ಚುನಾವಣೆ ನಡೆದ ಸಹಕಾರ ಸಂಘಗಳಲ್ಲಿ ಸದಸ್ಯರಾಗಿದ್ದು ಉಪ ನಿಯಮ ತಿದ್ದುಪಡಿಯನ್ವಯ ವ್ಯತ್ಯಾಸದ ಷೇರು ಮೊತ್ತವನ್ನು ಪಾವತಿಸದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರಿಗೆ ನಿಬಂಧಕರ ಕಲಂ 30–ಬಿ ನಿರ್ದೇಶನದನ್ವಯ 30–ಬಿ ನಿರ್ದೇಶನ ನೀಡಿದ ದಿನಾಂಕ: 29–01–2015 ಅಥವಾ ನಂತರ ದಿನಾಂಕಗಳಂದು ಪಾವತಿಸಲಾಗಿದೆಯೆಂದು ಪರಿಗಣಿಸಿ (Deemed to have paid) ಸದರಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರಿಗೆ ಮತದಾನದ ಹಕ್ಕನ್ನು ನೀಡಿರುವ ಬಗ್ಗೆ ಅರ್ಹ ಮತದಾರರ ಪಟ್ಟಿಯನ್ನು ಜಿಲ್ಲಾ ಚುನಾವಣಾಧಿಕಾರಿಯವರು ಅನುಮೋದಿಸಿರುವ ಬಗ್ಗೆ ಉಪ ನಿಬಂಧಕರಿಂದ ದೃಢೀಕರಣ ಪಡೆಯುವುದು.
3. ಈ ಯೋಜನೆಯು 2014–15ನೇ ಸಾಲಿನಲ್ಲಿ ಚುನಾವಣೆ ನಡೆದ ಸಹಕಾರ ಸಂಘಗಳಲ್ಲಿ ಸದಸ್ಯರಾಗಿದ್ದು ಉಪ ನಿಯಮ ತಿದ್ದುಪಡಿಯನ್ವಯ ವ್ಯತ್ಯಾಸದ ಷೇರು ಮೊತ್ತವನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರು ಪಾವತಿಸದ ಇರುವ ಬಗ್ಗೆ ಸಂಬಂಧಿಸಿದ ಸಹಕಾರ ಸಂಘಧ ಕಾರ್ಯದರ್ಶಿಯಿಂದ ದೃಢೀಕರಣ ಪಡೆಯುವುದು.
4. ಈ ಯೋಜನೆಯು 2014–15ನೇ ಸಾಲಿನಲ್ಲಿ ಚುನಾವಣೆ ನಡೆದಿರುವ ಬಗ್ಗೆ ಸಂಬಂಧಿಸಿದ ಸಹಕಾರ ಸಂಘದಿಂದ ಫಲಿತಾಂಶದ ದೃಢೀಕೃತ ಪ್ರತಿ.
5. ಈ ಯೋಜನೆಯು 2014–15ನೇ ಸಾಲಿನಲ್ಲಿ ಸಹಕಾರ ಸಂಘದ ಚುನಾವಣೆ ನಡೆಸಲು ಚುನಾವಣಾ ಪ್ರಾಧಿಕಾರದಿಂದ ಹೊರಡಿಸಿರುವ ಅಧಿಸೂಚನೆಯ ಪ್ರತಿ.
6. ಈ ಯೋಜನೆಯು 2014–15ನೇ ಸಾಲಿನಲ್ಲಿ ಚುನಾವಣೆ ನಡೆದ ಸಹಕಾರ ಸಂಘದ ಉಪ ನಿಯಮದ ತಿದ್ದುಪಡಿಗೆ ಪೂರ್ವದಲ್ಲಿದ್ದ ಉಪ ನಿಯಮದ ದೃಢೀಕರಣದ (ಸಂಬಂಧಿಸಿದ ಸಹಾಯಕ ನಿಬಂಧಕರಿಂದ) ಪ್ರತಿ.
7. ಈ ಯೋಜನೆಯು 2014–15ನೇ ಸಾಲಿನಲ್ಲಿ ಚುನಾವಣೆ ನಡೆದ ಸಹಕಾರ ಸಂಘದ ಉಪ ನಿಯಮದ ತಿದ್ದುಪಡಿ ನಂತರದ ಉಪ ನಿಯಮದ ದೃಢೀಕರಣದ (ಸಂಬಂಧಿಸಿದ ಸಹಾಯಕ ನಿಬಂಧಕರಿಂದ) ಪ್ರತಿ.
8. ಈ ಯೋಜನೆಯ ಫಲಾನುಭವಿಗಳಿಗೆ ಸಂಪೂರ್ಣ ಷೇರು ಪಾವತಿಯಾಗಿರುವ ಬಗ್ಗೆ ವೈಯಕ್ತಿಕವಾಗಿ ಸಂಘವು ಸಂಬಂಧಿಸಿದ ಸದಸ್ಯರಿಗೆ ಲಿಖಿತ ಮೂಲಕ ತಿಳಿಸತಕ್ಕದ್ದು ಹಾಗೂ ಪಾವತಿಯಾಗಿರುವ ಷೇರು ಮೊಬಲಗಿಗೆ ಷೇರು ಸರ್ಟಿಫಿಕೇಟನ್ನು ಒದಗಿಸತಕ್ಕದ್ದು.
9. ಜ್ಯೇಷ್ಠತೆಯ ಆಧಾರದ ಮೇಲೆ ಲಭ್ಯವಿರುವ ಅನುದಾನದ ಮಿತಿಯೊಳಗೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 10 ಎಫ್‌ಆರ್‌ಓ 2016, ದಿನಾಂಕ: 25–06–2016 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ: ಸಂಖ್ಯೆ: ಎಫ್‌ಡಿ 105 ಇಎಕ್ಸ್‌ಪಿ–2/2016, ದಿನಾಂಕ: 18–05–2016 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಧಾಕೃಷ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ–3,

ಸಹಕಾರ ಇಲಾಖೆ.

**P.R.463**

**SC-50**

## ಇಂಧನ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರದ ಇಂಧನ ಇಲಾಖೆಯ ಸಚಿವಾಲಯದಲ್ಲಿ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಅನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯ 2016, ದಿ: 14–03–2016.

2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 88 ಸೇಲೋಯ 2016, ದಿ: 22–06–2016.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ದಿ: 14–03–2016 ರ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988 ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Aniti Corruption Bureau) ಸೃಜಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿ: 22–06–2016 ರ ಆದೇಶದಲ್ಲಿ ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿ: 14–03–2016 ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಕೆ 7 ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ದಿನಾಂಕ: 22–06–2016ರ ಆದೇಶದ ಆದೇಶ ಭಾಗದ ಕಂಡಿಕೆ 1(1) ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಎಲ್ಲಾ ಇಲಾಖೆಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದ್ದೆಂದೂ ಹಾಗೂ ಆಯಾ ಇಲಾಖೆಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ ಕಾರ್ಯದರ್ಶಿಗಳ ನಂತರ (Officer next in seniority) ಅಧಿಕಾರಿಯನ್ನು ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿರುತ್ತದೆ.

ಅದರಂತೆ, ಪರಿಶೀಲಿಸಿ, ಇಂಧನ ಇಲಾಖೆಗೆ ಸಂಬಂಧಿಸಿದಂತೆ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 69 ಇಇಬಿ 2016, ಬೆಂಗಳೂರು, ದಿನಾಂಕ: 29–06–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸರ್ಕಾರದ ಸಚಿವಾಲಯದ ಇಂಧನ ಇಲಾಖೆಗೆ ಸಂಬಂಧಿಸಿದಂತೆ, ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರನ್ನು ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

**P.R.464**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ವಿಧಾನ ಸಭೆ, ವಿಧಾನ ಪರಿಷತ್‌ನ ಮಾನ್ಯ ಸದಸ್ಯರುಗಳಿಗೆ ಹೆಚ್ಚುವರಿಯಾಗಿ ಇನ್ನೊಬ್ಬ ಆಪ್ತ ಸಹಾಯಕರನ್ನು ಒದಗಿಸಲು ಸೃಜಿಸಲಾಗಿದ್ದ 300 ತಾತ್ಕಾಲಿಕ ಹೊಸ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 177 ಆಹಿಸೇ 2009, ದಿ: 03–02–2010.

2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 235 ಶಿಸನೇ 2013 ದಿ: 02–12–2013. & ತಿದ್ದುಪಡಿ ದಿನಾಂಕ: 21–01–2015.

3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 38 ಶಿಸನೇ 2014, ದಿ: 28–05–2014.

4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06 ವಿಸಸೇ 2015, ದಿನಾಂಕ: 15–05–2015.

**ಪ್ರಸ್ತಾವನೆ:–**

ಮೇಲೆ ಓದಲಾದ(1)ರ ಆದೇಶದಲ್ಲಿ ಮಾನ್ಯ ಶಾಸಕರುಗಳಿಗೆ ಮತ್ತು ವಿಧಾನ ಪರಿಷತ್ ಸದಸ್ಯರುಗಳಿಗೆ ಒಬ್ಬ ಆಪ್ತ ಸಹಾಯಕರನ್ನು ನೇಮಕ ಮಾಡಿಕೊಳ್ಳಲು ಆದೇಶಿಸಲಾಗಿದೆ. ಮೇಲೆ (2)ರಲ್ಲಿ ಓದಲಾಗಿರುವ ಆದೇಶದಲ್ಲಿ ಕರ್ನಾಟಕ ವಿಧಾನಸಭೆ/ವಿಧಾನ ಪರಿಷತ್‌ನ ಮಾನ್ಯ ಸದಸ್ಯರುಗಳಿಗೆ ಹೆಚ್ಚುವರಿಯಾಗಿ ಇನ್ನೊಬ್ಬ ಆಪ್ತ ಸಹಾಯಕರನ್ನು ಒದಗಿಸಲು ತೀರ್ಮಾನಿಸಿ ಅದರಂತೆ ಆದೇಶ ಹೊರಡಿಸಲಾಗಿದೆ. ಸದರಿ ಆದೇಶದಲ್ಲಿ ಈ ಹೆಚ್ಚುವರಿ ಆಪ್ತ ಸಹಾಯಕರ ಸೇವೆಯನ್ನು ಕಂದಾಯ, ಆರೋಗ್ಯ, ಶಿಕ್ಷಣ ಮತ್ತು ಪೊಲೀಸ್ ಇಲಾಖೆ, ವಾಣಿಜ್ಯ ತೆರಿಗೆ, ಅಬಕಾರಿ, ರಾಜ್ಯ ಲೆಕ್ಕಪತ್ರ ಮತ್ತು ಖಜಾನೆ ಇಲಾಖೆಗಳಲ್ಲಿರುವ ತಾಂತ್ರಿಕ ಸಿಬ್ಬಂದಿಯನ್ನು ಹೊರತುಪಡಿಸಿ 'ಸಿ'–ವೃಂದದ ಸಿಬ್ಬಂದಿಗಳನ್ನು ಮತ್ತು ಇನ್ನಿತರ ಇಲಾಖೆಗಳ 'ಸಿ' ವೃಂದದ ಸಿಬ್ಬಂದಿಗಳನ್ನು ನೇಮಿಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ, ಹಾಗೆಯೇ, ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಬಗ್ಗೆ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳನ್ವಯ ಅರ್ಹ ನಿವೃತ್ತ ನೌಕರರು ಮತ್ತು ಅರ್ಹ ಖಾಸಗಿ ವ್ಯಕ್ತಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಅನುಮೋದನೆ ನೀಡಲಾಗಿದೆ.

ಈ ಉದ್ದೇಶಕ್ಕಾಗಿ ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ವಿಧಾನ ಸಭೆ ಮತ್ತು ಪರಿಷತ್ತಿನ ಮಾನ್ಯ ಸದಸ್ಯರಿಗೆ ಈಗ ಇರುವ ಒಬ್ಬ ಆಪ್ತ ಸಹಾಯಕರ ಜೊತೆಗೆ ಹೆಚ್ಚುವರಿಯಾಗಿ ಮತ್ತೊಬ್ಬ ಆಪ್ತ ಸಹಾಯಕರನ್ನು ನೇಮಿಸಿಕೊಳ್ಳಲು ಕೆಲವು ಷರತ್ತುಗಳಿಗೊಳಪಟ್ಟು 300 ಹುದ್ದೆಗಳನ್ನು ತಾತ್ಕಲಿಕವಾಗಿ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ. ಈ 300 ತಾತ್ಕಾಲಿಕ ಹುದ್ದೆಗಳನ್ನು ಕಾಲಕಾಲಕ್ಕೆ ಒಂದೊಂದು ವರ್ಷಕ್ಕೆ ಮುಂದುವರಿಸಲಾಗಿದ್ದು, ಮೇಲೆ ಓದಲಾದ (4)ರ ಸರ್ಕಾರದ ಆದೇಶದಲ್ಲಿ ಮುಂದುವರಿಸಲಾಗಿದ್ದ ಒಂದು ವರ್ಷದ ಅವಧಿಯು ದಿನಾಂಕ: 27–05–2016 ರಂದು ಮುಕ್ತಾಯವಾಗಲಿದ್ದು, ದಿನಾಂಕ: 28–05–2015ರಿಂದ ಇನ್ನೂ ಒಂದು ವರ್ಷದ ಅವಧಿಗೆ ಮುಂದುವರಿಸುವುದು ಅತ್ಯವಶ್ಯಕವೆಂದು ಸರ್ಕಾರವು ಮನಗಂಡು ಈ ಕೆಳಕಂಡಂತೆ ಆದೇಶಿಸಿದೆ;

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ವಿಸಸೇ 2016, ಬೆಂಗಳೂರು, ದಿನಾಂಕ: 27–04–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಧಾನ ಸಭೆ ಮತ್ತು ವಿಧಾನ ಪರಿಷತ್ತಿನ ಮಾನ್ಯ ಸದಸ್ಯರುಗಳಿಗೆ ಈಗ ಇರುವ ಒಬ್ಬ ಆಪ್ತ ಸಹಾಯಕರ ಜೊತೆಗೆ ಹೆಚ್ಚುವರಿಯಾಗಿ ಮತ್ತೊಬ್ಬ ಆಪ್ತ ಸಹಾಯಕರನ್ನು ನೇಮಿಸಿಕೊಳ್ಳಲು 300 ಹುದ್ದೆಗಳನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಸೃಜಿಸಿರುವುದನ್ನು ದಿನಾಂಕ: 28–05–2016 ರಿಂದ ಇನ್ನೂ ಒಂದು ವರ್ಷದ ಅವಧಿಗೆ ಮುಂದುವರಿಸಿದೆ.

ಈ 300 ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಿ ಆದೇಶಿಸಲಾದ ದಿನಾಂಕ: 28–05–2014ರ ಸರ್ಕಾರದ ಆದೇಶದಲ್ಲಿ ನಿಗಧಿಪಡಿಸಿರುವ ಷರತ್ತು ಮತ್ತು ನಿಬಂಧನೆಗಳು ಮುಂದುವರಿಯುತ್ತವೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/253/ವೆಚ್ಚ/–12/2016, ದಿನಾಂಕ: 30–03–2016ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಎಸ್. ಚನ್ನಬಸಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ & ಆಡಳಿತ ಸುಧಾರಣೆ ಇಲಾಖೆ,
(ಆಡಳಿತ–1)

**P.R.465**
**SC-100**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಶೇ. 50ರ ರಿಯಾಯಿತಿ ದರದಲ್ಲಿ ಕೈಗಾರಿಕಾ ನಿವೇಶನ/ ಶೆಡ್‌ಗಳನ್ನು ಹಂಚಿಕೆ ಮಾಡುವ ಕುರಿತು.

**ಓದಲಾಗಿದೆ:**
1) ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೈವಾಇ/ಕೈಅ/ಇ1/1455/2016–17, ದಿನಾಂಕ: 15–04–2016.
2) ಸರ್ಕಾರಿ ಆದೇಶ ಸಂಖ್ಯೆ: ಸಿಐ 147 ಸಿಎಸ್‌ಸಿ 2015, ದಿ: 22–07–2015.
3) ಕೈಗಾರಿಕಾ ನೀತಿ 2014–19 ಜಾರಿಗೆ ತಂದಿರುವ ಸರ್ಕಾರಿ ಆದೇಶ ಸಂಖ್ಯೆ: ಸಿಐ 58 ಎಸ್‌ಪಿಐ 2014, ದಿನಾಂಕ: 01–10–2014.

**ಪ್ರಸ್ತಾವನೆ:–**

2016–17ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 378(1)ರಲ್ಲಿ ಈ ಕೆಳಕಂಡಂತೆ ಘೋಷಣೆಯಾಗಿರುತ್ತದೆ.

***"ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳ ಉದ್ದಿಮಿಗಳಲ್ಲಿ ಉದ್ಯಮಶೀಲತೆಯನ್ನು ಉತ್ತೇಜಿಸಲು ಮತ್ತು ಕೈಗಾರಿಕಾ ಸಾಮರ್ಥ್ಯವನ್ನು ತುಂಬಲು ಈ ಕೆಳಕಂಡ ಕ್ರಮಗಳನ್ನು ಪ್ರಸ್ತಾಪಿಸಿದೆ.***

- ***ಶೇ. 50 ದರದಲ್ಲಿ ಪರಿಶಿಷ್ಟ ಜಾತಿ /ಪರಿಶಿಷ್ಟ ಪಂಗಡಗಳ ಉದ್ಯಮಿಗಳಿಗೆ ಕೆ.ಐ.ಎ.ಡಿ.ಬಿ./ಕೆ.ಎಸ್.ಎಸ್.ಐ.ಡಿ.ಸಿ. ಯಿಂದ ಶೆಡ್ ಮತ್ತು ಭೂಮಿಯನ್ನು ಹಂಚಿಕೆ ಮಾಡಲಾಗುವುದು ಭೂಮಿ ಮತ್ತು ಶೆಡ್‌ಗಳ ಮೌಲ್ಯದ ಪಾವತಿಯನ್ನು ಕಂತುಗಳಲ್ಲಿ ಪರಿಗಣಿಸಲಾಗುವುದು. ಇದರಲ್ಲಿ ಶೇ. 50 ರಷ್ಟನ್ನು ಮೊದಲಿಗೆ ಪಾವತಿಸಬೇಕಾಗಿದ್ದು, ಬಾಕಿ ಶೇ. 50 ರಷ್ಟನ್ನು 8 ಸಮ ತ್ರೈಮಾಸಿಕ ಕಂತುಗಳಲ್ಲಿ ಪಾವತಿಸಬೇಕಾಗಿರುತ್ತದೆ"***

ಅದರಂತೆ ಮೇಲೆ ಕ್ರಮಾಂಕ ಓದಲಾದ (1)ರ ಪತ್ರದಲ್ಲಿ ಆಯುಕ್ತರು, ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ/ ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮದಿಂದ ಹಂಚಿಕೆಯಾಗುವ ಕೈಗಾರಿಕಾ ನಿವೇಶನ /ಶೆಡ್‌ನ್ನು ಶೇ. 50 ರ ರಿಯಾಯಿತಿ ದರದಲ್ಲಿ ಹಂಚಿಕೆ ಮಾಡಲು ಈ ಕೆಳಕಂಡಂತೆ ಓದಲಾದ (2)ರ ಸರ್ಕಾರಿ ಆದೇಶಕ್ಕೆ ತಿದ್ದುಪಡಿಗಳನ್ನು ತಂದು ಪರಿಷ್ಕೃತ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ.

1) 2014–19ರ ಕೈಗಾರಿಕಾ ನೀತಿಯನ್ವಯ ವರ್ಗೀಕರಿಸಲಾದ ಹೈದ್ರಾಬಾದ್–ಕರ್ನಾಟಕ ಪ್ರದೇಶದ ವಲಯ–1 ಮತ್ತು 2 ಹಾಗೂ ಹೈದ್ರಾಬಾದ್–ಕರ್ನಾಟಕೇತರ ಪ್ರದೇಶದ ವಲಯ–1, 2, 3, 4 ರಲ್ಲಿ ಸ್ಥಾಪಿಸಲು ಮುಂದೆ ಬರುವ ಎಲ್ಲಾ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳ ಉದ್ಯಮಶೀಲರಿಗೆ ಶೇ. 50ರ ದರದಲ್ಲಿ ಶೆಡ್ ಮತ್ತು ಭೂಮಿಯನ್ನು ಹಂಚಿಕೆ ಮಾಡುವುದು.
2) ಭೂಮಿ ಮತ್ತು ಶೆಡ್ ಮೌಲ್ಯದ ಶೇ. 50ನ್ನು ಸರ್ಕಾರದ ವತಿಯಿಂದ ಮೊದಲು ಕೆ.ಐ.ಎ.ಡಿ.ಬಿ / ಕೆ.ಎಸ್.ಎಸ್.ಐ.ಡಿ.ಸಿ ಗೆ ಪಾವತಿಸುವುದು.
3) ಭೂಮಿ ಮತ್ತು ಶೆಡ್ ಮೌಲ್ಯದ ಶೇ. 50ನ್ನು ಉದ್ಯಮಶೀಲರಿಂದ 8 ಸಮ ತ್ರೈಮಾಸಿಕ ಕಂತುಗಳಲ್ಲಿ ಕೆ.ಐ.ಎ.ಡಿ.ಬಿ / ಕೆ.ಎಸ್.ಎಸ್.ಐ.ಡಿ.ಸಿ ಗೆ ಪಾವತಿಸುವುದು.
4) ಈ ರಿಯಾಯಿತಿಯ ಮರುಪಾವತಿಯನ್ನು ಇಲಾಖೆಯಿಂದ ಅನುಷ್ಠಾನಗೊಳಿಸುತ್ತಿರುವ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆಯ (SCSP/TSP) ಮಾರ್ಗಸೂಚಿಯಂತೆ ಪಾಲಿಸತಕ್ಕದ್ದು.

ಈ ಪ್ರಸ್ತಾವನೆಗೆ ಸಂಬಂಧಿಸಿದಂತೆ, ಆರ್ಥಿಕ/ ಯೋಜನಾ ಇಲಾಖೆಯ ಈ ಕೆಳಕಂಡಂತೆ ಅಭಿಪ್ರಾಯ ನೀಡಿರುತ್ತದೆ.

**ಆರ್ಥಿಕ ಇಲಾಖೆಯ ಅಭಿಪ್ರಾಯ**

"The Proposal regarding Budget Speech Para No. 378 is examined. FD agrees to the proposal with the modification that KIADB/KSSIDC shall charge suitable interest on the instalments to cover its own cost of funds. AD may kindly recall the during budget discussions, an EMI concept including suitable interest portion was agreed in principal."

**ಯೋಜನಾ ಇಲಾಖೆಯ ಅಭಿಪ್ರಾಯ**

ಕೆಎಸ್ಎಸ್ಐಡಿಸಿ ಮತ್ತು ಕೆಐಎಡಿಬಿ ಸಂಸ್ಥೆಗಳಿಂದ ಎಸ್‌ಸಿ/ಎಸ್‌ಟಿ ಉದ್ದಿಮೆದಾರರಿಗೆ ಹಂಚಿಕೆಯಾಗುವ ಕೈಗಾರಿಕಾ ನಿವೇಶನ / ಶೆಡ್‌ಗಳ ಮೌಲ್ಯದಲ್ಲಿ ಶೇ. 50 ರಷ್ಟು ರಿಯಾಯಿತಿ ನೀಡುವ ಇಲಾಖೆಯ ಪ್ರಸ್ತಾವನೆಗೆ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದಿಂದ ಈ ಕಾರ್ಯಕ್ರಮವನ್ನು ತ್ವರಿತ ಮಾದರಿ ಸಮೀಕ್ಷೆಗೆ (Rapid Assessment) ಒಳಪಡಿಸುವ ಷರತ್ತಿಗೊಳಪಡಿಸಿ ಸಹಮತಿಸುತ್ತದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 81 ಸಿಎಸ್‌ಸಿ 2016, ಬೆಂಗಳೂರು, ದಿನಾಂಕ: 27-06-2016**.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2016-17ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಲಾಗಿರುವಂತೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಉದ್ಯಮಿಗಳಿಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಕೆ.ಐ.ಎ.ಡಿ.ಬಿ.) ಮತ್ತು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ (ಕೆ.ಎಸ್.ಎಸ್.ಐ.ಡಿ.ಸಿ) ಸಂಸ್ಥೆಗಳಿಂದ ಕೈಗಾರಿಕಾ ನಿವೇಶನ /ಮಳಿಗೆಗಳನ್ನು ಶೇ. 50ರ ರಿಯಾಯಿತಿ ದರದಲ್ಲಿ ಈ ಕೆಳಕಂಡ ನಿಬಂಧನೆಗಳಿಗೊಳಪಡಿಸಿ ಹಂಚಿಕೆ ಮಾಡಲು ಅನುಮೋದನೆ ನೀಡಲಾಗಿದೆ.

- ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಹಂಚಿಕೆಯಾಗುವ ಕೈಗಾರಿಕಾ ನಿವೇಶನ/ ಮಳಿಗೆಯ ಶೇ. 50 ರ ರಿಯಾಯಿತಿ ಮೌಲ್ಯವನ್ನು ಸರ್ಕಾರದಿಂದ ಸಂಬಂಧಿಸಿದ ಸಂಸ್ಥೆಗಳಿಗೆ ಕೆ.ಎಸ್.ಎಸ್.ಐ.ಡಿ.ಸಿ / ಕೆ.ಐ.ಎ.ಡಿ.ಬಿ) ಪಾವತಿ ಮಾಡುವುದು.
- ಈ ಶೇ. 50ರ ರಿಯಾಯಿತಿ ಮೌಲ್ಯವನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ವಿಶೇಷ ಘಟಕ ಯೋಜನೆ/ ಗಿರಿಜನ ಉಪಯೋಜನೆ (SCSP/TSP) ಅಡಿಯಲ್ಲಿ ಹಂಚಿಕೆಯಾಗುವ ಆಯವ್ಯಯದಿಂದ ಭರಿಸತಕ್ಕದ್ದು ಮತ್ತು (SCSP/TSP) ಯೋಜನೆಯಡಿಯಲ್ಲಿ ಈ ಕಾರ್ಯಕ್ರಮಕ್ಕೆ ರೂಪಿಸಲಾಗಿರುವ ಮಾರ್ಗಸೂಚಿಗಳನ್ನು ಪಾಲಿಸತಕ್ಕದ್ದು.
- ಹಂಚಿಕೆ ಪಡೆದ ಉದ್ದಿಮೆದಾರರಿಂದ ನಿವೇಶನ/ ಮಳಿಗೆಯ ಶೇ. 25ರಷ್ಟು ಮೌಲ್ಯವನ್ನು ಮೊದಲು (Upfront) ಸಂಬಂಧಿಸಿದ ಸಂಸ್ಥೆಗಳು ಪಡೆದುಕೊಳ್ಳತಕ್ಕದ್ದು. ನಂತರ, ಉಳಿದ ಶೇ. 25ರಷ್ಟು ನಿವೇಶನ / ಮಳಿಗೆಯ ಮೌಲ್ಯದ ಮೊತ್ತವನ್ನು 8 ಸಮ ತ್ರೈಮಾಸಿಕ ಕಂತುಗಳಲ್ಲಿ ಸೂಕ್ತ ಬಡ್ಡಿ ದರದೊಂದಿಗೆ ವಸೂಲಾತಿ ಮಾಡಿಕೊಳ್ಳತಕ್ಕದ್ದು.

ಈ ಆದೇಶವನ್ನು ದಿನಾಂಕ: 01-04-2016 ರಿಂದ ಅನ್ವಯವಾಗುವಂತೆ ಜಾರಿಗೊಳಿಸಲಾಗಿದೆ.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 06 ಎಫ್‌ಆರ್‌ಓ 2016, ದಿನಾಂಕ: 23-06-2016 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 190 ವೆಚ್ಚ-01 2016, ದಿನಾಂಕ: 13-05-2016 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಓದಲಾದ ಕ್ರ. ಸಂ. (2)ರಲ್ಲಿರುವ ಸರ್ಕಾರದ ಆದೇಶ ಸಂಖ್ಯೆ: ಸಿಐ 147 ಸಿಎಸ್‌ಸಿ 2015, ದಿನಾಂಕ: 22-07-2015ನ್ನು ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ನಾಗರಾಜ,**
ಪೀಠಾಧಿಕಾರಿ (ಸಪ್ರಕೈ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**P.R.466**
**SC-25**

**ಸಹಕಾರ ಸಚಿವಾಲಯ**

**ವಿಷಯ:** ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಭೀಮನಕೋಣೆ ಶಾಖೆ ಇದರ 2014-15ನೇ ಸಾಲಿನ ಲೆಕ್ಕ ಪತ್ರಗಳನ್ನು ಮರುಪರಿಶೀಲನೆ ಕೈಗೊಳ್ಳಲು ಅನುಮತಿ ನೀಡುವ ಕುರಿತು.

**ಓದಲಾಗಿದೆ:** ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಪತ್ರ ಸಂಖ್ಯೆ: ತಪಫ /ಬೆಂವಿಶಿ/ 44/2015-16/65, ದಿನಾಂಕ: 07-04-2016.

**ಪ್ರಸ್ತಾವನೆ:-**

ಮೇಲೆ ಓದಲಾದ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಪ್ರಸ್ತಾವನೆಯಲ್ಲಿ ದಿನಾಂಕ: 11-09-2015 ರಂದು ಜರುಗಿದ ಪಿಕಾರ್ಡ್ ಬ್ಯಾಂಕ್, ಭೀಮನಕೋಣೆ ಇದರ ಸರ್ವಸದಸ್ಯರ ಸಭೆಯಲ್ಲಿ ಮರು ಲೆಕ್ಕಪರಿಶೋಧನೆಯನ್ನು ಮಾಡಿಸಲು ಕ್ರಮವಿಡಲು ನಿರ್ಣಯಿಸಿದ್ದು, ಉಪ ನಿರ್ದೇಶಕರು, ಶಿವಮೊಗ್ಗರವರು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ಭೀಮನಕೋಣೆ ಶಾಖೆಗೆ ಭೇಟಿ ನೀಡಿ ಪರಿಶೀಲಿಸಿ, ಈ ಕೆಳಕಂಡ ಅಂಶಗಳಿಗೆ ಸಂಬಂಧಿಸಿದಂತೆ ಲೆಕ್ಕಗಳನ್ನು ಪುನರ್ ಪರಿಶೀಲನೆ ಮಾಡುವುದು ಅಗತ್ಯವಿರುವುದಾಗಿ ತಿಳಿಸಿರುತ್ತಾರೆ.

1) ಕಲಂ 57 ನಿಯಮ 22 ರಲ್ಲಿನ ನಿರ್ದೇಶನವನ್ನು ಪಾಲಿಸದೇ ಕಲ್ಪಿತ ಲಾಭವನ್ನು ಸೃಷ್ಟಿಸಿರುವುದು ಬರತಕ್ಕ ಬಡ್ಡಿಯನ್ನು ಲಾಭಕ್ಕೆ ಅಕರಣೆ ಮಾಡಿದ ಆಡಿಟ್ ವರದಿಯು ಬ್ಯಾಂಕಿನ ನೈಜ ಆರ್ಥಿಕ ಸ್ಥಿತಿಯನ್ನು ಬಿಂಬಿಸಿರುವುದಿಲ್ಲ.

2) ಕಾದಿರಿಸಿದ ಬಾಬ್ತು (ನಷ್ಟಕ್ಕೆ) ಎಂದು ಸ್ವಂತ ಬಂಡವಾಳ ಸಮತೋಲನ ನಿಧಿ ₹ 5,00,000-00 ಕಟ್ಟಡ ಕಾಂಪೌಂಡ್‌ಗೆ ಕಾದಿರಿಸಿದ್ದು ₹ 12,00,000-00 ಮತ್ತು ಮರು ಮೌಲ್ಯ ಇಲ್ಲದ ಆಸ್ತಿಗಳಿಗೆ ₹ 3,00,000-00 ಜಮ್ಲಾ ₹ 20,00,000-00 ಇರುತ್ತದೆ ಇದು ನಿಯಮ ಬಾಹಿರವಾಗಿರುತ್ತದೆ.

3) ತಿರಸ್ಕೃತಗೊಂಡ 6, 4, 3% ಬಡ್ಡಿ ರಿಯಾಯ್ತಿ ಬಿಲ್ ಎಂದು ₹ 5,19,349/- ಗಳನ್ನು ನಷ್ಟಕ್ಕೆ ಹಾಕುವ ಮುನ್ನ ಅನುಸರಿಸಬೇಕಾದ ಯಾವ ಮಾನದಂಡವನ್ನು ಅನುಸರಿಸಿದೆ ಎಂದು ವರದಿಯಲ್ಲಿ ಉಲ್ಲೇಖಿಸಿರುವುದಿಲ್ಲ.

4) ಸರ್ಕಾರದಿಂದ ಕಟ್ಟಡ ನಿರ್ಮಾಣಕ್ಕೆ ವರದಿ ಸಾಲಿನಲ್ಲಿ ಪಡೆದ ₹ 14,00,000–00/– ಗಳ ಅನುದಾನದ ಮೊಬಲಗನ್ನು ಬ್ಯಾಂಕಿನ ಅಢಾವೆ ಪತ್ರಿಕೆಯಲ್ಲಿ ಜವಾಬ್ದಾರಿ ತೋರಿಸದೇ ಜಮಾ ಖರ್ಚು ಪತ್ರಿಕೆಯಲ್ಲಿಯೇ ಖರ್ಚು ತೋರಿಸಲಾಗಿರುತ್ತದೆ.

5) ಇತರೆ ಆದಾಯಗಳ ಲೆಕ್ಕಶೀರ್ಷಿಕೆಯಲ್ಲಿ ₹ 2,68,614–36 ಯಾವ ಬಾಬತ್ತಿನಿಂದ ಬಂದ ಆದಾಯವೆಂದು ವಿವರಿಸಲು ಆಡಳಿತ ಸಮಿತಿ ವಿಫಲವಾಗಿರುತ್ತದೆ.

ಉಪನಿರ್ದೇಶಕರು, ಶಿವಮೊಗ್ಗರವರ ಅಭಿಪ್ರಾಯದಂತೆ ಆರ್ಥಿಕ ತಃಖ್ತೆಗಳು ನಿಖರವಾದ ಮಾಹಿತಿಯನ್ನು ಪ್ರತಿಬಿಂಬಿಸಿರುವುದಿಲ್ಲವೆಂಬ ಅಂಶವು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಭೀಮನಕೋಣೆ ಶಾಖೆ ಇದರ 2014–15ನೇ ಸಾಲಿನ ಪರಿಶೋಧಿತ ಆರ್ಥಿಕ ತಃಖ್ತೆಗಳ ಮರುಪರಿಶೀಲನೆ ಕೈಗೊಳ್ಳಲು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959, ಕಲಂ 63(13)(ಎ) ರಂತೆ ಅನುಮೋದನೆ ನೀಡಲು ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ 2014–15ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಲ್ಲಿನ ಲೆಕ್ಕಗಳನ್ನು ಮರು ಪರಿಶೀಲನೆ ನಡೆಸುವುದು ಸೂಕ್ತವೆಂದು ಭಾವಿಸಿ ಈ ಕೆಳಕಂಡಂತೆ ಆದೇಶಿಸಿದೆ.

**<u>ಸರ್ಕಾರದ ಆದೇಶ ಸಂಖ್ಯೆ: ಸಿಒ 40 ಸಿಎಲ್‌ಎಂ 2016, ಬೆಂಗಳೂರು, ದಿನಾಂಕ: 24–06–2016</u>.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಭೀಮನಕೋಣೆ ಶಾಖೆ ಇದರ 2014–15ನೇ ಸಾಲಿನ ಪರಿಶೋಧಿತ ಲೆಕ್ಕಪತ್ರಗಳನ್ನು ಮರು ಪರಿಶೀಲನೆ ಕೈಗೊಳ್ಳಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 63 (13)(ಎ) ರೀತ್ಯ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R.469
SC-50

**ಕೆ. ರಾಧಕೃಷ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಹಕಾರ ಇಲಾಖೆ,

## ಕಂದಾಯ ಸಚಿವಾಲಯ

**ವಿಷಯ:** ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರಡಿಯಲ್ಲಿ ಕೃಷಿ ಜಮೀನನ್ನು ಖರೀದಿಸಲು ಅರ್ಜಿಗಳನ್ನು ಆನ್‌ಲೈನ್ ಮುಖಾಂತರ ಸ್ವೀಕರಿಸಲು ಮತ್ತು ನಿರ್ವಹಿಸಲು ತಂತ್ರಾಂಶವನ್ನು ಅಭಿವೃದ್ಧಿಪಡಿಸುವ ಕುರಿತು.

**ಓದಲಾಗಿದೆ:** ನಿರ್ದೇಶಕರು, ಭೂ ದಾಖಲೆಗಳ ಆಧುನೀಕರಣ ಮತ್ತು ಭೂಮಿ, ಕಂದಾಯ ಇಲಾಖೆ ಇವರ ಪತ್ರ ಸಂಖ್ಯೆ: ಬಿಎಂಸಿ/ಎಡಿಂ/06/2016–17, ದಿನಾಂಕ: 29–04–2016.

**ಪ್ರಸ್ತಾವನೆ:–**

2016–17ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 331ರ ಉಪ ಕಂಡಿಕೆ 2 ರಲ್ಲಿ ಭೂ ಸುಧಾರಣೆ ಕಾಯ್ದೆ, ಕಲಂ 109 ರಡಿಯಲ್ಲಿ ಅರ್ಜಿಗಳನ್ನು ಆನ್‌ಲೈನ್‌ನಲ್ಲಿ ಸ್ವೀಕರಿಸಿ ಸಕಾಲದಲ್ಲಿ ವಿಲೇ ಮಾಡಲು ತಂತ್ರಾಂಶವನ್ನು ಅಭಿವೃದ್ಧಿಪಡಿಸಲಾಗುವುದು ಎಂದು ಮಾನ್ಯ ಮುಖ್ಯ ಮಂತ್ರಿಯವರು ಘೋಷಿಸಿರುತ್ತಾರೆ.

ತತ್ಸಂಬಂಧ ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಭೂ ದಾಖಲೆಗಳ ಅಧುನೀಕರಣ ಮತ್ತು ಭೂಮಿ, ಕಂದಾಯ ಇಲಾಖೆ, ಬೆಂಗಳೂರು ಇವರು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಅಡಿಯಲ್ಲಿ ಅರ್ಜಿಗಳನ್ನು ಆನ್‌ಲೈನ್ ಮೂಲಕ ಸ್ವೀಕರಿಸಿ ಕಾಲಮಿತಿಯೊಳಗೆ ಇತ್ಯರ್ಥಪಡಿಸುವ ಕಾರ್ಯ ಕ್ರಮದ ಬಗ್ಗೆ ಸರ್ಕಾರದ ಅಧಿಸೂಚನೆ ಹೊರಡಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ತಂತ್ರಾಂಶದ ಮುಖಾಂತರ ರಾಜ್ಯದಲ್ಲಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಅಡಿಯಲ್ಲಿ ಕೃಷಿ ಜಮೀನನ್ನು ಖರೀದಿಸಲು ಸ್ವೀಕರಿಸಿದ ಅರ್ಜಿಗಳ ಹಂತದಿಂದ ಅಂತಿಮ ಅನುಮತಿ ಆದೇಶದವರೆಗೆ ವಿವಿಧ ಹಂತದಲ್ಲಿನ ಸ್ಥಿತಿ–ಗತಿ ಕುರಿತು ಆನ್‌ಲೈನ್‌ನಲ್ಲಿ ಮಾಹಿತಿ ಲಭ್ಯಪಡಿಸಲಾಗುವುದು. ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರ ಅಡಿಯಲ್ಲಿ ಕೃಷಿ ಜಮೀನನ್ನು ಖರೀದಿಸಲು ಆದೇಶವನ್ನು ಜಿಲ್ಲಾಧಿಕಾರಿಯವರು ಡಿಜಿಟಲ್ ಸಹಿಯಿಂದ ಅನುಮೋದಿಸಿ ಆನ್‌ಲೈನ್ ಮುಖಾಂತರ ನೀಡುವ ಸೌಲಭ್ಯವನ್ನು ಕಲ್ಪಿಸಲಾಗುವುದು. ಸದರಿ ತಂತ್ರಾಂಶವನ್ನು ಭೂಮಿ ಉಸ್ತುವಾರಿ ಕೋಶದಲ್ಲಿ ಲಭ್ಯವಿರುವ ತಾಂತ್ರಿಕ ನೈಪುಣ್ಯತೆ ಹೊಂದಿರುವ ಸಿಬ್ಬಂದಿಗಳನ್ನು ಬಳಸಿ ಅಭಿವೃದ್ಧಿಪಡಿಸಲಾಗುವುದು ಮತ್ತು ಈ ಕಾರ್ಯಕ್ಕಾಗಿ ಇಲಾಖೆಯ ಮೇಲೆ ಯಾವುದೇ ಆರ್ಥಿಕ ಹೊರೆ ಇರುವುದಿಲ್ಲವೆಂದು ನಿರ್ದೇಶಕರು ಭೂ ದಾಖಲೆಗಳ ಆಧುನೀಕರಣ ಮತ್ತು ಭೂಮಿ ಕಂದಾಯ ಇಲಾಖೆ ಇವರು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**<u>ಸರ್ಕಾರದ ಆದೇಶ ಸಂಖ್ಯೆ: ಕಂಇ 103 ಎಲ್‌ಆರ್‌ಎ 2016, ಬೆಂಗಳೂರು, ದಿನಾಂಕ: 21–06–2016</u>.**

ಮೇಲೆ ಪ್ರಸ್ತಾಪಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರಡಿಯಲ್ಲಿ ಕೃಷಿ ಜಮೀನನ್ನು ಖರೀದಿಸಲು ಅರ್ಜಿಗಳನ್ನು ಆನ್‌ಲೈನ್ ಮುಖಾಂತರ ಸ್ವೀಕರಿಸಲು ಮತ್ತು ನಿರ್ವಹಿಸಲು ತಂತ್ರಾಂಶವನ್ನು ಅಭಿವೃದ್ಧಿಪಡಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ಯೋಜನೆಯ ಅನುಷ್ಠಾನದ ಭೌತಿಕ ಪ್ರಗತಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: 2674, ದಿನಾಂಕ: 17–06–2016ರಲ್ಲಿ ಮತ್ತು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: PD 33PFO 2016 ದಿನಾಂಕ 21–06–2016ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

**P.R.470**
**SC-20**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಾಲರಾಜ ದೇವರಖದ್ರಾ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಭೂ ಸುಧಾರಣೆ)

## ಕಾನೂನು ಸಚಿವಾಲಯ

**ವಿಷಯ:** **ಎಸ್.ಎ. ಮಾನ್ವಿ ಕಾನೂನು ಕಾಲೇಜು, ಗದಗ** ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಹುದ್ದೆಗಳ ನೇಮಕಾತಿಯನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಲಾ 81 ಕೆಎಲ್ಎಂ 2009, ದಿನಾಂಕ: 28–11–2012.
2. ಸರ್ಕಾರಿ ಆದೇಶ ಸಂಖ್ಯೆ : ಲಾ 42 ಕೆಎಲ್ಎಂ 2013, ದಿನಾಂಕ: 26–08–2015.
3. ಸರ್ಕಾರದ ತಿದ್ದೋಲೆ ಸಂಖ್ಯೆ: ಲಾ 42 ಕೆಎಲ್ಎಂ 2013, ದಿನಾಂಕ: 23–12–2015.
4. ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಾಶಿಇ/11/ಲಾ/ಖಾಕಾಕಾ/2012–13/ನೇವಿ–2, ದಿನಾಂಕ: 04.02.2016.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರಿ ಆದೇಶ ದಿನಾಂಕ: 28.11.2012ರಲ್ಲಿ ಪ್ರೋ. ಮಾಲಿ ಮುದ್ದಣ ವರದಿಯನ್ನಾಧರಿಸಿ ಸರ್ಕಾರವು ಸುಸ್ಥಿತಿಯಲ್ಲಿರುವ ಹಾಗೂ ಸತತವಾಗಿ ಆಯಾ ವಿಶ್ವವಿದ್ಯಾಲಯಗಳಿಗೆ 5 (ಐದು) ವರ್ಷಗಳ ಎಲ್.ಎಲ್.ಬಿ ಕೋರ್ಸು ಅಥವಾ 3 (ಮೂರು) ವರ್ಷಗಳ ಎಲ್.ಎಲ್.ಬಿ ಕೋರ್ಸು ಅಥವಾ ಎರಡೂ ಅವಧಿಯ ಎಲ್.ಎಲ್.ಬಿ ಕೋರ್ಸುಗಳನ್ನು ನಡೆಸಲು ಸಂಯೋಜನೆ ಮಾಡಿಕೊಂಡಿದ್ದ ಒಟ್ಟು 19 ಖಾಸಗಿ ಕಾನೂನು ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಲು ತಾತ್ವಿಕವಾಗಿ ಒಪ್ಪಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಸರ್ಕಾರದ ಅನುದಾನಕ್ಕೆ ಒಳಪಡಿಸಿದ ಖಾಸಗಿ ಕಾನೂನು ಕಾಲೇಜುಗಳ ಪೈಕಿ ಕ್ರಮ ಸಂಖ್ಯೆ: (08)ರ **ಎಸ್.ಎ.ಮಾನ್ವಿ ಕಾನೂನು ಕಾಲೇಜು, ಗದಗ** ಇಲ್ಲಿನ ಬೊಧಕ ಮತ್ತು ಬೋಧಕೇತರ ಸಿಬ್ಬಂದಿಗಳ ನೇಮಕಾತಿಯನ್ನು ಅನುಮೋದಿಸಲಾಗಿದೆ.

ಸದರಿ ಆದೇಶದಲ್ಲಿ ಕೆಲವೊಂದು ಕಾರಣಕ್ಕಾಗಿ ಬೋಧಕ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸಿರುವುದಿಲ್ಲ, ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸದೇ ಇರುವ ಪ್ರಕರಣಗಳ ಬಗ್ಗೆ ಸಂಬಂಧಪಟ್ಟ ಸಿಬ್ಬಂದಿಗಳು ಈ ಆದೇಶ ಹೊರಡಿಸಿದ ಒಂದು ತಿಂಗಳೊಳಗಾಗಿ ಯುಕ್ತ ಮಾರ್ಗದಲ್ಲಿ ಅಗತ್ಯ ದಾಖಲಾತಿಗಳೊಂದಿಗೆ ಸರ್ಕಾರಕ್ಕೆ ಮನವಿ ಸಲ್ಲಿಸಿದ್ದಲ್ಲಿ, ಅಂತಹ ಮನವಿಗಳನ್ನು ನಿಯಮಾನುಸಾರ ಪರಿಶೀಲಿಸಲಾಗುವುದು ಎಂದು ದಿನಾಂಕ: 26.08.2015ರ ಆದೇಶದಲ್ಲಿ ಸೂಚಿಸಲಾಗಿತ್ತು.

ಅದರಂತೆ, ಮೇಲೆ ಓದಲಾದ (4)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ದಿನಾಂಕ: 26.08.2015ರ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸದೇ ಇರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಬಗ್ಗೆ ಮಾಹಿತಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಮೇಲೆ ಓದಲಾದ (4)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ಉಪನ್ಯಾಸಕರಾದ ಲಾರ್. ಎಂ. ಶಿರೂರ ಹಾಗೂ ದೈಹಿಕ ಶಿಕ್ಷಕರಾದ ಸಿ.ಬಿ. ರಣಗಟ್ಟಿಮಠ ಇವರುಗಳು ನಿಗಧಿತ ವಿದ್ಯಾರ್ಹತೆ ಹೊಂದಿಲ್ಲದೆ ಇರುವುದರಿಂದ ಇವರನ್ನು ವೇತನಾನುದಾನಕ್ಕೆ ಒಳಪಡಿಸಲು ನಿಯಮಗಳಲ್ಲಿ ಅವಕಾಶವಿಲ್ಲವೆಂದು ತಿಳಿಸಿರುತ್ತಾರೆ.

ಶ್ರೀ ಡಿ.ಕೆ. ಕುಸುಗಲ್, ಗ್ರಂಥಪಾಲಕರು, ಇವರಿಗೆ ಈಗಾಗಲೇ ರಾಜ್ಯ ವೇತನ ಶ್ರೇಣಿಯಲ್ಲಿ ವೇತನಾನುದಾನಕ್ಕೆ ಒಳಪಡಿಸಲಾಗಿದ್ದು, ಸದರಿಯವರು ದಿನಾಂಕ: 31.12.2007ರಂದು Mphil ಪದವಿ ಹೊಂದಿರುವುದರಿಂದ ಇವರಿಗೆ ಈ ಆದೇಶ ಹೊರಡಿಸಿದ ದಿನಾಂಕದಿಂದ ಯು.ಜಿ.ಸಿ ವೇತನ ಶ್ರೇಣಿಗೆ ಅರ್ಹತೆ ಹೊಂದಿರುತ್ತಾರೆ ಎಂದು ತಿಳಿಸಿರುತ್ತಾರೆ.

ಸದರಿ ಕಾನೂನು ಕಾಲೇಜಿನಲ್ಲಿ 08–ಬೋಧಕ ಮತ್ತು 13–ಬೋಧಕೇತರ ಹುದ್ದೆಗಳು ಮಂಜೂರಾಗಿದ್ದು, ದಿನಾಂಕ:26–08–2016ರ ಸರ್ಕಾರಿ ಆದೇಶದಲ್ಲಿ 05–ಬೋಧಕರು ಮತ್ತು 09–ಬೋಧಕೇತರ ಹುದ್ದೆಗಳನ್ನು ವೇತನಾನುದಾನಕ್ಕೆ ಒಳಪಡಿಸಲಾಗಿದೆ. ಮೀಸಲಾತಿ ಹುದ್ದೆಗಳನ್ನು ಹೊರತುಪಡಿಸಿ, 01–ದೈಹಿಕ ಶಿಕ್ಷಣ ಹುದ್ದೆ ಖಾಲಿಯಿರುತ್ತದೆ. ಈ ಹುದ್ದೆಗೆ ಯಾವುದೇ ಅರ್ಹ ಅಭ್ಯರ್ಥಿಯನ್ನು ಕಾಲೇಜು ಶಿಕ್ಷಣ ಆಯುಕ್ತರು ಶಿಫಾರಸ್ಸು ಮಾಡಿರುವುದಿಲ್ಲ.

ಕುಮಾರಿ ಪಿ.ಐ. ಶೆಟ್ಟಿ, ಸಹಾಯಕ ಪ್ರಾಧ್ಯಾಪಕರು ಇವರು ರಾಜೀನಾಮೆ ನೀಡಿರುವುದರಿಂದ 01–ಸಹಾಯಕ ಪ್ರಾಧ್ಯಾಪಕರ ಹುದ್ದೆ ಖಾಲಿಯಿರುತ್ತದೆ. ಈ ಹುದ್ದೆಗೆ ಶೀ ಜೈ ಹನುಮಾನ್ ಹೆಚ್.ಕೆ. ಸಹಾಯಕ ಪ್ರಾಧ್ಯಾಪಕರು, ಇವನ್ನು ವೇತನಾನುದಾನಕ್ಕೆ ಒಳಪಡಿಸುವಂತೆ ಕಾಲೇಜು ಶಿಕ್ಷಣ ಆಯುಕ್ತರು ಶಿಫಾರಸ್ಸು ಮಾಡಿರುತ್ತಾರೆ.

ಶ್ರೀ ಹೆಚ್.ಕೆ. ಜೈ ಹನುಮಾನ್, ಸಹಾಯಕ ಪ್ರಾಧ್ಯಾಪಕರು ನಿಗಧಿತ ವಿದ್ಯಾರ್ಹತೆಯಾದ ಎನ್.ಇ.ಟಿ./ಎಸ್.ಎಲ್.ಇ.ಟಿ./ಪಿ.ಹೆಚ್.ಡಿ ಪದವಿ ಹೊಂದದೆಯಿರುವುದರಿಂದ ಇವರನ್ನು ದಿನಾಂಕ:26.08.2015ರ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸಿರುವುದಿಲ್ಲ. ಸದರಿಯವರು ದಿನಾಂಕ: 25.03.2013 ರಂದು NET ಪದವಿಯನ್ನು ಹೊಂದಿದ್ದು, ಇವರನ್ನು ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ವೇತನಾನುದಾನಕ್ಕೆ ಒಳಪಡಿಸಬಹುದು ಎಂದು ಕಾಲೇಜು ಶಿಕ್ಷಣ ಆಯುಕ್ತರು ಅಭಿಪ್ರಾಯ ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 42 ಕೆಎಲ್‌ಎಂ 2013, ಬೆಂಗಳೂರು, ದಿನಾಂಕ: 11.07.2016.**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಎಸ್.ಎ. ಮಾನ್ವಿ ಕಾನೂನು ಕಾಲೇಜು, ಗದಗ ಖಾಲಿ ಇರುವ 01–ಜಿ–ಎಂ–ಸಹಾಯಕ ಪ್ರಾಧ್ಯಾಪಕರ ಹುದ್ದೆಯಲ್ಲಿ ಶ್ರೀ ಹೆಚ್.ಕೆ. ಜೈ ಹನುಮಾನ್ ಇವರನ್ನು ಆದೇಶ ಹೊರಡಿಸಿದ ದಿನಾಂಕದಿಂದ ಯು.ಜಿ.ಸಿ ವೇತನ ಶ್ರೇಣಿಯಲ್ಲಿ ಈ ಕೆಳಕಂಡ ಷರತ್ತುಗಳೊಂದಿಗೆ ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರವು ಸಹಮತಿ ನೀಡಿದೆ.

| ಹೆಸರು | ಹುದ್ದೆ | L.L.M ಶೇಕಡಾ ಅಂಕ | ಮೀಸಲಾತಿ | ಸೇವೆಗೆ ಸೇರಿದ ದಿನಾಂಕ | ವೇತನ ಶ್ರೇಣಿ |
|---|---|---|---|---|---|
| ಶ್ರೀ ಜೈ ಹನುಮಾನ್ ಹೆಚ್.ಕೆ. | ಸಹಾಯಕ ಪ್ರಾಧ್ಯಾಪಕರು | 56.04% | ಜಿ.ಎಂ. | ದಿನಾಂಕ: 20.11.2012 | ಯು.ಜಿ.ಸಿ ವೇತನ ಶ್ರೇಣಿ (NET ವಿದ್ಯಾರ್ಹತೆ ಹೊಂದಿರುತ್ತಾರೆ) |

ಡಿ.ಕೆ. ಕುಸುಗಲ್ ಗ್ರಂಥಪಾಲಕರು ಈ ಆದೇಶವನ್ನು ಹೊರಡಿಸಿದ ದಿನಾಂಕದಿಂದ ರಾಜ್ಯ ವೇತನ ಶ್ರೇಣಿಯಿಂದ ಯು.ಜಿ.ಸಿ ವೇತನ ಶ್ರೇಣಿಗೆ ಪರಿಷ್ಕರಣೆ ಮಾಡಲು ಸರ್ಕಾರವು ಸಹಮತಿ ನೀಡಿದೆ.

| ಹೆಸರು | ಹುದ್ದೆ | ಈಗಾಗಲೇ ಜಾರಿಯಲ್ಲಿರುವ ವೇತನ ಶ್ರೇಣಿ | ವೇತನ ಶ್ರೇಣಿಗೆ ಪರಿಷ್ಕರಣೆ |
|---|---|---|---|
| ಡಿ.ಕೆ. ಕುಸುಗಲ್ | ಗ್ರಂಥಪಾಲಕರು | ರಾಜ್ಯ ವೇತನ ಶ್ರೇಣಿ | ಯು.ಜಿ.ಸಿ ವೇತನ ಶ್ರೇಣಿ Mpil ವಿದ್ಯಾರ್ಹತೆ ದಿನಾಂಕ: 31.12.2007 ರಂದು ಹೊಂದಿರುತ್ತಾರೆ. (ಆದೇಶ ಸಂಖ್ಯೆ: ಇಡಿ 37 ಯುಎನ್‌ಇ 2009, ದಿನಾಂಕ: 24.12.2009 ರನ್ವಯ ದಿನಾಂಕ: 11.07.2009ರ ಪೂರ್ವದಲ್ಲಿ Mpil ಪದವಿಯನ್ನು ಪಡೆದಿದ್ದರೆ ಯು.ಜಿ.ಸಿ ವೇತನ ಶ್ರೇಣಿಗೆ ಅವಕಾಶವಿದೆ.) |

**ಷರತ್ತುಗಳು:**

(1) ಹಿಂದುಳಿದ ವರ್ಗಗಳ ಪ್ರಾತಿನಿಧ್ಯದಲ್ಲಿ ಮೀಸಲಾತಿ ಕೊರತೆಯನ್ನು ಭವಿಷ್ಯತ್ತಿನಲ್ಲಿ ತೆರವಾಗುವ ಎಲ್ಲಾ ಹುದ್ದೆಗಳನ್ನು ಮೀಸಲಾತಿ ಕೊರತೆ ಸರಿದೂಗುವವರೆಗೆ ಸಂಬಂಧಪಟ್ಟ ಮೀಸಲಾತಿ ಅಭ್ಯರ್ಥಿಗಳಿಂದಲೇ ಕಡ್ಡಾಯವಾಗಿ ನೇಮಕಾತಿ ಮಾಡಿಕೊಳ್ಳತಕ್ಕದ್ದು.

(2) ಈ ಕಾಲೇಜಿನ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಗಳ ಶೈಕ್ಷಣಿಕ ಅರ್ಹತೆಗೆ ಸಂಬಂಧಿಸಿದ ಎಲ್ಲಾ ಅಂಕಪಟ್ಟಿ/ಪ್ರಮಾಣ ಪತ್ರಗಳ ಸತ್ಯಾಸತ್ಯತೆಯನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ದೃಢೀಕರಿಸಿಕೊಂಡ ನಂತರವೇ ವೇತನ ಪಾವತಿಗೆ ಕ್ರಮಕೈಗೊಳ್ಳುವುದು.

(3) ಈ ಆದೇಶದನ್ವಯ ವೇತನಾನುದಾನಕ್ಕೆ ಒಳಪಟ್ಟಿರುವ ಬೋಧಕ ಹಾಗೂ ಬೋಧಕೇತರರ ಸಿಬ್ಬಂದಿಗಳಿಗೆ ವೇತನ ಬಿಡುಗಡೆ ಮಾಡುವ ಮುನ್ನ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳ ಅಡಿಯಲ್ಲಿ ನೇಮಕಾತಿ ಹೊಂದಿದ್ದಲ್ಲಿ ಅಂತಹ ಸಿಬ್ಬಂದಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪಾಧಿಕಾರದಿಂದ ಖಚಿತಪಡಿಸಿಕೊಳ್ಳತಕ್ಕದ್ದು.

(4) ಹುದ್ದೆ ಅನುಮೋದನೆಗೊಂಡಿರುವ ಸಿಬ್ಬಂದಿಯು ಯಾವುದೇ ಹಂತದಲ್ಲಿ ತಮ್ಮ ಹೇಳಿಕೆ/ಅಸತ್ಯವಾದ ಮಾಹಿತಿಯನ್ನು ಒದಗಿಸಿದ್ದಲ್ಲಿ ಅಂತಹ ನೇಮಕಾತಿಯನ್ನು ರದ್ದುಪಡಿಸಲಾಗುವುದು.

(5) ಸಿಬ್ಬಂದಿಗಳ ವೇತನಾನುದಾನವು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.

(6) ದಿನಾಂಕ: 24.12.1998ಕ್ಕಿಂತ ಹಿಂದೆ ನೇಮಕವಾದ ಉಪನ್ಯಾಸಕರುಗಳು ಸೇವಾ ವಿಚ್ಛಿನ್ನತೆಯನ್ನು ಹೊಂದಿರಬಾರದು.

(7) ಮುಂದೆ ತುಂಬಲಾಗುವ ಹುದ್ದೆಗಳಿಗೆ ಸಂಬಂಧಿಸಿದ ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿಯನ್ನು ಪಡೆಯತಕ್ಕದ್ದು.

(8) ಬೋಧಕ ಮತ್ತು ಭೋದಕೇತರ ಸಿಬ್ಬಂದಿಯವರು ಅನುದಾನ ರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ಯಾವುದೇ ಸೇವಾ ಸೌಲಭ್ಯಗಳಿಗೆ ಪರಿಗಣಿಸಲಾಗುವುದಿಲ್ಲ ಎಂಬ ಷರತ್ತಿಗೆ ಬದ್ಧವಾಗಿರುತ್ತೇನೆಂದು ₹.50/–ಛಾಪಾ ಕಾಗದದಲ್ಲಿ ಮುಚ್ಚಳಿಕೆ ಪತ್ರವನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಬರೆಯಿಸಿಕೊಳ್ಳತಕ್ಕದ್ದು.

(9) ಮೇಲಿನ ಆದೇಶದನ್ವಯ ಈ ಕಾಲೇಜಿಗೆ ಸಂಬಂಧಿಸಿದಂತೆ ನೇಮಕವಾಗಿರುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳಿಗೆ ವೇತನಾನುದಾನವನ್ನು ಬಿಡುಗಡೆ ಮಾಡುವ ಮುನ್ನ ನ್ಯಾಯಾಲಯದಲ್ಲಿ ಯಾವುದೇ ವಿಧವಾದ ವ್ಯಾಜ್ಯ/ವಿವಾದ ಬಾಕಿ ಇರುವುದಿಲ್ಲ ಎಂಬುದನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಖಚಿತಪಡಿಸಿಕೊಳ್ಳತಕ್ಕದ್ದು.

(10) ಸದರಿ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸಿರುವ ಸಿಬ್ಬಂದಿಗಳನ್ನು ಹೆಚ್.ಆರ್.ಎಂ.ಎಸ್.ನಲ್ಲಿ ಅಳವಡಿಸಲು ಅಗತ್ಯ ಕ್ರಮ ಕೈಗೊಳ್ಳುವುದು.

(11) ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾಗುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳನ್ನು ನೇಮಕಾತಿಗಾಗಿ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಿ ಸರ್ಕಾರದ ಪೂರ್ವಾನುಮತಿಯನ್ನು ಪಡೆಯುವುದು.

(12) ಸಂಬಂಧಪಟ್ಟ ಜಂಟಿ ನಿರ್ದೇಶಕರು ಪ್ರತಿ ವರ್ಷವು ವೇತನಾನುದಾನಕ್ಕೆ ಒಳಪಟ್ಟಿರುವ ಕಾಲೇಜಿನ ಆಡಳಿತ ಮಂಡಳಿಯು ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವುದನ್ನು ದೃಢೀಕರಿಸಿದ ನಂತರವೇ ಆಯುಕ್ತಾಲಯದಿಂದ ಅನುದಾನ ಬಿಡುಗಡೆ ಮಾಡತಕ್ಕದ್ದು.

(13) ವೇತನಾನುದಾನ ಬಿಡುಗಡೆಗೆ ಸಂಬಂಧಿಸಿದಂತೆ ಯಾವುದೇ ನ್ಯೂನತೆಗಳು ಉಂಟಾದಲ್ಲಿ ಸಂಬಂಧಪಟ್ಟ ಪ್ರಾದೇಶಿಕ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆಯವರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

ಮೇಲೆ ಅನುದಾನಕ್ಕೆ ಒಳಪಡಿಸಿರುವ **ಎಸ್.ಎ. ಮಾನ್ವಿ ಕಾನೂನು ಕಾಲೇಜು, ಗದಗ** ವೇತನಾನುದಾನದ ವೆಚ್ಚವನ್ನು ಕಾನೂನು ಇಲಾಖೆಯ ಲೆಕ್ಕ ಶೀರ್ಷಿಕೆ ಸಂಖ್ಯೆ 2014–00–105–0–15 Private Aded Law Colleges-101-Grant-in aid Schemes (Plan) ರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 179 ವೆಚ್ಚ–10/2016. ದಿನಾಂಕ:27.06.2016ರ ಸಹಮತಿಯನ್ವಯ ಹೊರಡಿಸಲಾಗಿದೆ.

**P.R.494**
**SC. 100**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎಸ್. ಸುಧಾಮಣಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ. (ಮಾನವ ಹಕ್ಕುಗಳು)

## ಕಾನೂನು ಸಚಿವಾಲಯ

**ವಿಷಯ:** **ಎಸ್.ಡಿ.ಎಮ್ ಕಾನೂನು ಕಾಲೇಜು, ಮಂಗಳೂರು** ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಹುದ್ದೆಗಳ ನೇಮಕಾತಿಯನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ : ಲಾ 81 ಕೆಎಲ್ಎಂ 2009, ದಿನಾಂಕ: 28–11–2012.
2. ಸರ್ಕಾರಿ ಆದೇಶ ಸಂಖ್ಯೆ : ಲಾ 55 ಕೆಎಲ್ಎಂ 2013, ದಿನಾಂಕ: 26–08–2015.
3. ಸರ್ಕಾರದ ತಿದ್ದೋಲೆ ಸಂಖ್ಯೆ: ಲಾ 55 ಕೆಎಲ್ಎಂ 2013, ದಿನಾಂಕ: 19–12–2015.
4. ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಾಶಿಇ/10/ಲಾ/ಖಾಕಾಕಾ/2012–13/ನೇವಿ–2, ದಿನಾಂಕ: 15.02.2016.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರಿ ಆದೇಶ ದಿನಾಂಕ: 28.11.2012ರಲ್ಲಿ ಪ್ರೋ. ಮಾಲಿ ಮುದ್ದಣ ವರದಿಯನ್ನಾಧರಿಸಿ ಸರ್ಕಾರವು ಸುಸ್ಥಿತಿಯಲ್ಲಿರುವ ಹಾಗೂ ಸತತವಾಗಿ ಆಯಾ ವಿಶ್ವವಿದ್ಯಾಲಯಗಳಿಗೆ 5 (ಐದು) ವರ್ಷಗಳ ಎಲ್.ಎಲ್.ಬಿ ಕೋರ್ಸು ಅಥವಾ 3 (ಮೂರು) ವರ್ಷಗಳ ಎಲ್.ಎಲ್.ಬಿ ಕೋರ್ಸು ಅಥವಾ ಎರಡೂ ಅವಧಿಯ ಎಲ್.ಎಲ್.ಬಿ ಕೋರ್ಸುಗಳನ್ನು ನಡೆಸಲು ಸಂಯೋಜನೆ ಮಾಡಿಕೊಂಡಿದ್ದ ಒಟ್ಟು 19 ಖಾಸಗಿ ಕಾನೂನು ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಲು ತಾತ್ವಿಕವಾಗಿ ಒಪ್ಪಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಸರ್ಕಾರದ ಅನುದಾನಕ್ಕೆ ಒಳಪಡಿಸಿದ ಖಾಸಗಿ ಕಾನೂನು ಕಾಲೇಜುಗಳ ಪೈಕಿ ಕ್ರಮ ಸಂಖ್ಯೆ: (07)ರ **ಎಸ್ ಡಿ ಎಮ್ ಕಾನೂನು ಕಾಲೇಜು, ಮಂಗಳೂರು** ಇಲ್ಲಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ನೇಮಕಾತಿಯನ್ನು ಅನುಮೋದಿಸಲಾಗಿದೆ.

ಸದರಿ ಆದೇಶದಲ್ಲಿ ಕೆಲವೊಂದು ಕಾರಣಕ್ಕಾಗಿ ಬೋಧಕ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸಿರುವುದಿಲ್ಲ, ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸದೇ ಇರುವ ಪ್ರಕರಣಗಳ ಬಗ್ಗೆ ಸಂಬಂಧಪಟ್ಟ ಸಿಬ್ಬಂದಿಗಳು ಈ ಆದೇಶ ಹೊರಡಿಸಿದ ಒಂದು ತಿಂಗಳೊಳಗಾಗಿ ಯುಕ್ತ ಮಾರ್ಗದಲ್ಲಿ ಅಗತ್ಯ ದಾಖಲಾತಿಗಳೊಂದಿಗೆ ಸರ್ಕಾರಕ್ಕೆ ಮನವಿ ಸಲ್ಲಿಸಿದ್ದಲ್ಲಿ, ಅಂತಹ ಮನವಿಗಳನ್ನು ನಿಯಮಾನುಸಾರ ಪರಿಶೀಲಿಸಲಾಗುವುದು ಎಂದು ದಿನಾಂಕ: 26.08.2015ರ ಆದೇಶದಲ್ಲಿ ಸೂಚಿಸಲಾಗಿತ್ತು.

ಅದರಂತೆ, ಮೇಲೆ ಓದಲಾದ (4)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ದಿನಾಂಕ: 26.08.2015ರ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸದೇ ಇರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಬಗ್ಗೆ ಮಾಹಿತಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

**ಎಸ್.ಡಿ.ಎಮ್ ಕಾನೂನು ಕಾಲೇಜು, ಮಂಗಳೂರು** ಈ ಕಾಲೇಜಿನಲ್ಲಿ ಲಭ್ಯವಿರುವ ಕಾರ್ಯಭಾರಕ್ಕನುಗುಣವಾಗಿ 18 ಬೋಧಕ ಸಿಬ್ಬಂದಿಗಳಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಲಾ 55 ಕೆಎಲ್ಎಂ 2013, ದಿನಾಂಕ: 26.08.2015ರಲ್ಲಿ 06–ಸಹಾಯಕ ಪ್ರಾಧ್ಯಾಪಕರು, 01–ಗ್ರಂಥಪಾಲಕರ ನೇಮಕಾತಿಯನ್ನು ಅನುಮೋದಿಸಲಾಗಿದೆ. ಉಳಿದಂತೆ 01–ಎಸ್‌ಟಿ ಮತ್ತು 03–ಎಸ್‌ಸಿ ಹಾಗೂ 05–ಜಿಎಂ–ಸಹಾಯಕ ಪ್ರಾಧ್ಯಾಪಕರ ಹುದ್ದೆಗಳು ಮತ್ತು 01– ದೈ.ಶಿ.ಬೋ ಖಾಲಿ ಇರುತ್ತವೆ.

ಮೇಲೆ ಓದಲಾದ (4)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ಸಹಾಯಕ ಕಾನೂನು ಪ್ರಾಧ್ಯಾಪಕರುಗಳಾದ ಶ್ರೀ ಮಹೇಶ್ಚಂದ್ರ ನಾಯಕ್, ಶ್ರೀ ರಕ್ಷಿತ್, ಶುಭಲಕ್ಷ್ಮಿ.ಪಿ. ಇವರುಗಳು ನಿಗಧಿತ ವಿದ್ಯಾರ್ಹತೆ ಹೊಂದಿಲ್ಲದೆ ಇರುವುದರಿಂದ ಇವರನ್ನು ವೇತನಾನುದಾನಕ್ಕೆ ಒಳಪಡಿಸಲು ನಿಯಮಗಳಲ್ಲಿ ಅವಕಾಶವಿಲ್ಲವೆಂದು ತಿಳಿಸಿರುತ್ತಾರೆ.

ಶ್ರೀ ಶಶಿಪ್ರಸಾದ್, ದೈಹಿಕ ಶಿಕ್ಷಣ ಬೋಧಕರು ದಿನಾಂಕ: 02.09.2010 ರಂದು ಎಸ್.ಡಿ.ಎಂ. ಕಾನೂನು ಕಾಲೇಜಿನಲ್ಲಿ ನೇಮಕಾತಿಯಾಗಿದ್ದು, ನಿಗಧಿತ ವಿದ್ಯಾರ್ಹತೆಯಾದ ಎನ್.ಇ.ಟಿ/ಎಸ್.ಎಲ್.ಇ.ಟಿ/ಪಿ.ಹೆಚ್.ಡಿ ಪದವಿ ಹೊಂದದೆಯಿರುವುದರಿಂದ ಇವರನ್ನು ದಿನಾಂಕ: 26.08.2015ರ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸಿರುವುದಿಲ್ಲ. ಸದರಿಯವರು ದಿನಾಂಕ: 02.09.1999ರಂದು MpEd ಪದವಿಯನ್ನು ಪಡೆದಿದ್ದು (ಶೇ.63.56) ಡಾ॥ ಎಂ.ವಿ. ಶೆಟ್ಟಿ ಇನ್ಸ್ಟಿಟ್ಯೂಟ್ ಆಫ್ ಹೆಲ್ತ್ ಸೈನ್ಸ್, ಮಂಗಳೂರು ಇಲ್ಲಿ ದಿನಾಂಕ: 03.07.2000 ರಿಂದ 05.10.2008ರವರೆಗೆ ಹಾಗೂ ಡಾ॥ ಎಂ.ವಿ. ಶೆಟ್ಟಿ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ (ಎಂ.ವಿ.ಎಸ್.ಐ.ಟಿ), ಮಂಗಳೂರು ಇಲ್ಲಿ ದಿನಾಂಕ: 06.10.2008ರಿಂದ 01.09.2010 ರವರೆಗೆ ಕರ್ತವ್ಯ ನಿರ್ವಹಿಸಿರುತ್ತಾರೆ. ಇವರ ಹಿಂದಿನ ಸೇವೆಯನ್ನು ಪರಿಗಣಿಸಿ, ಇವರನ್ನು ರಾಜ್ಯವೇತನ ಶ್ರೇಣಿಯಲ್ಲಿ ವೇತನಾನುದಾನಕ್ಕೆ ಒಳಪಡಿಸಬಹುದು ಎಂದು ಕಾಲೇಜು ಶಿಕ್ಷಣ ಆಯುಕ್ತರು ಅಭಿಪ್ರಾಯ ನೀಡಿರುತ್ತಾರೆ. ಇವರು 2006ರ ಪೂರ್ವದಲ್ಲಿ ನೇಮಕಾತಿ ಹೊಂದಿದ್ದು Mphil ಪದವಿ ಹೊಂದದೆಯಿರುವುರಿಂದ ಇವರನ್ನು ರಾಜ್ಯವೇತನ ಶ್ರೇಣಿಯಲ್ಲಿ ವೇತನಾನುದಾನಕ್ಕೆ ಒಳಪಡಿಸಬಹುದು ಎಂದು ತೀರ್ಮಾನಿಸಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 55 ಕೆಎಲ್ಎಂ 2013, ಬೆಂಗಳೂರು, ದಿನಾಂಕ: 04.07.2016.**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಎಸ್.ಡಿ.ಎಂ. ಕಾನೂನು ಕಾಲೇಜು ಮಂಗಳೂರು ಇಲ್ಲಿ 01 ದೈಹಿಕ ಶಿಕ್ಷಣ ಬೋಧಕರ ಹುದ್ದೆಯು ಖಾಲಿಯಿದ್ದು, ಸದರಿ ಹುದ್ದೆಗೆ **ಶ್ರೀ ಶಶಿಪ್ರಸಾದ್** ಇವರನ್ನು ಆದೇಶ ಹೊರಡಿಸಿದ ದಿನಾಂಕದಿಂದ ರಾಜ್ಯ ವೇತನ ಶ್ರೇಣಿಯಲ್ಲಿ ಈ ಕೆಳಕಂಡ ಷರತ್ತುಗಳೊಂದಿಗೆ ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರವು ಸಹಮತಿ ನೀಡಿದೆ.

| ಹೆಸರು | ಹುದ್ದೆ | MpEd. ಶೇಕಡಾ ಅಂಕ | ಸೇವೆಗೆ ಸೇರಿದ ದಿನಾಂಕ | ವೇತನ ಶ್ರೇಣಿ |
|---|---|---|---|---|
| ಶ್ರೀ ಶಶಿಪ್ರಸಾದ್ | ದೈಹಿಕ ಶಿಕ್ಷಣ ಬೋಧಕರು | 63.56% | ದಿನಾಂಕ: 03.09.2000 (02.09.2010 ರಂದು ಈ ಕಾಲೇಜಿನಲ್ಲಿ ಸೇವೆ ಪ್ರಾರಂಭಿಸಿದ ದಿನಾಂಕ: ಆದೇಶ ಸಂಖ್ಯೆ: ED 354 UPC 93, ದಿನಾಂಕ: 08.02.1994 ರನ್ವಯ ಇವರು ಹಿಂದೆ ಸೇವೆ ಸಲ್ಲಿಸಿರುವ ಸೇವೆಯನ್ನು ಗರಿಷ್ಟ 10 ವರ್ಷಗಳನ್ನು ಕೇವಲ ವೇತಾನುದಾನಕ್ಕೆ ಅಂಶಕ್ಕೆ ಪರಿಗಣಿಸಬಹುದಾಗಿದೆ) ***ಸೇವಾ ವಿಚ್ಛಿನ್ನತೆ ಹೊಂದಿರಬಾರದು ಎಂಬ ಷರತ್ತಿಗೊಳಪಟ್ಟು** | ರಾಜ್ಯ ವೇತನ ಶ್ರೇಣಿ (ಕನಿಷ್ಠ ವಿದ್ಯಾರ್ಹತೆಯಾದ NET/SLET/Ph.D ಮತ್ತು Mphil ವಿದ್ಯಾರ್ಹತೆ ಪಡೆದಿರುವುದಿಲ್ಲ) |

**ಷರತ್ತುಗಳು:**

(1) ಹಿಂದುಳಿದ ವರ್ಗಗಳ ಪ್ರಾತಿನಿಧ್ಯದಲ್ಲಿ ಮೀಸಲಾತಿ ಕೊರತೆಯನ್ನು ಭವಿಷ್ಯತ್ತಿನಲ್ಲಿ ತೆರವಾಗುವ ಎಲ್ಲಾ ಹುದ್ದೆಗಳನ್ನು ಮೀಸಲಾತಿ ಕೊರತೆ ಸರಿದೂಗುವವರೆಗೆ ಸಂಬಂಧಪಟ್ಟ ಮೀಸಲಾತಿ ಅಭ್ಯರ್ಥಿಗಳಿಂದಲೇ ಕಡ್ಡಾಯವಾಗಿ ನೇಮಕಾತಿ ಮಾಡಿಕೊಳ್ಳತಕ್ಕದ್ದು.

(2) ಈ ಕಾಲೇಜಿನ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಗಳ ಶೈಕ್ಷಣಿಕ ಅರ್ಹತೆಗೆ ಸಂಬಂಧಿಸಿದ ಎಲ್ಲಾ ಅಂಕಪಟ್ಟಿ/ಪ್ರಮಾಣ ಪತ್ರಗಳ ಸತ್ಯಾಸತ್ಯತೆಯನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ದೃಢೀಕರಿಸಿಕೊಂಡ ನಂತರವೇ ವೇತನ ಪಾವತಿಗೆ ಕ್ರಮಕೈಗೊಳ್ಳುವುದು.

(3) ಈ ಆದೇಶದನ್ವಯ ವೇತನಾನುದಾನಕ್ಕೆ ಒಳಪಟ್ಟಿರುವ ಬೋಧಕ ಹಾಗೂ ಬೋಧಕೇತರರ ಸಿಬ್ಬಂದಿಗಳಿಗೆ ವೇತನ ಬಿಡುಗಡೆ ಮಾಡುವ ಮುನ್ನ ಪರಿಶಿಷ್ಠ ಜಾತಿ/ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳ ಅಡಿಯಲ್ಲಿ ನೇಮಕಾತಿ ಹೊಂದಿದ್ದಲ್ಲಿ ಅಂತಹ ಸಿಬ್ಬಂದಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪಾಧಿಕಾರದಿಂದ ಖಚಿತಪಡಿಸಿಕೊಳ್ಳತಕ್ಕದ್ದು.

(4) ಹುದ್ದೆ ಅನುಮೋದನೆಗೊಂಡಿರುವ ಸಿಬ್ಬಂದಿಯು ಯಾವುದೇ ಹಂತದಲ್ಲಿ ತಮ್ಮ ಹೇಳಿಕೆ/ಅಸತ್ಯವಾದ ಮಾಹಿತಿಯನ್ನು ಒದಗಿಸಿದ್ದಲ್ಲಿ ಅಂತಹ ನೇಮಕಾತಿಯನ್ನು ರದ್ದುಪಡಿಸಲಾಗುವುದು.

(5) ಸಿಬ್ಬಂದಿಗಳ ವೇತನಾನುದಾನವು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.

(6) ದಿನಾಂಕ: 24.12.1998ಕ್ಕಿಂತ ಹಿಂದೆ ನೇಮಕವಾದ ಉಪನ್ಯಾಸಕರುಗಳು ಸೇವಾ ವಿಚ್ಛಿನ್ನತೆಯನ್ನು ಹೊಂದಿರಬಾರದು.

(7) ಮುಂದೆ ತುಂಬಲಾಗುವ ಹುದ್ದೆಗಳಿಗೆ ಸಂಬಂಧಿಸಿದ ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿಯನ್ನು ಪಡೆಯತಕ್ಕದ್ದು.

(8) ಬೋಧಕ ಮತ್ತು ಭೋದಕೇತರ ಸಿಬ್ಬಂದಿಯವರು ಅನುದಾನ ರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ಯಾವುದೇ ಸೇವಾ ಸೌಲಭ್ಯಗಳಿಗೆ ಪರಿಗಣಿಸಲಾಗುವುದಿಲ್ಲ ಎಂಬ ಷರತ್ತಿಗೆ ಬದ್ಧವಾಗಿರುತ್ತೇನೆಂದು ₹.50/–ಛಾಪಾ ಕಾಗದದಲ್ಲಿ ಮುಚ್ಚಳಿಕೆ ಪತ್ರವನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಬರೆಯಿಸಿಕೊಳ್ಳತಕ್ಕದ್ದು.

(9) ಮೇಲಿನ ಆದೇಶದನ್ವಯ ಈ ಕಾಲೇಜಿಗೆ ಸಂಬಂಧಿಸಿದಂತೆ ನೇಮಕವಾಗಿರುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳಿಗೆ ವೇತನಾನುದಾನವನ್ನು ಬಿಡುಗಡೆ ಮಾಡುವ ಮುನ್ನ ನ್ಯಾಯಾಲಯದಲ್ಲಿ ಯಾವುದೇ ವಿಧವಾದ ವ್ಯಾಜ್ಯ/ವಿವಾದ ಬಾಕಿ ಇರುವುದಿಲ್ಲ ಎಂಬುದನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಖಚಿತಪಡಿಸಕೊಳ್ಳತಕ್ಕದ್ದು.

(10) ಸದರಿ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸಿರುವ ಸಿಬ್ಬಂದಿಗಳನ್ನು ಹೆಚ್.ಆರ್.ಎಂ.ಎಸ್. ನಲ್ಲಿ ಅಳವಡಿಸಲು ಅಗತ್ಯ ಕ್ರಮ ಕೈಗೊಳ್ಳುವುದು.

(11) ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾಗುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳನ್ನು ನೇಮಕಾತಿಗಾಗಿ ಮಿಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಿ ಸರ್ಕಾರದ ಪೂರ್ವಾನುಮತಿಯನ್ನು ಪಡೆಯುವುದು.

(12) ಸಂಬಂಧಪಟ್ಟ ಜಂಟಿ ನಿರ್ದೇಶಕರು ಪ್ರತಿ ವರ್ಷವು ವೇತನಾನುದಾನಕ್ಕೆ ಒಳಪಟ್ಟಿರುವ ಕಾಲೇಜಿನ ಆಡಳಿತ ಮಂಡಳಿಯು ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವುದನ್ನು ದೃಢೀಕರಿಸಿದ ನಂತರವೇ ಆಯುಕ್ತಾಲಯದಿಂದ ಅನುದಾನ ಬಿಡುಗಡೆ ಮಾಡತಕ್ಕದ್ದು.

(13) ವೇತನಾನುದಾನ ಬಿಡುಗಡೆಗೆ ಸಂಬಂಧಿಸಿದಂತೆ ಯಾವುದೇ ನ್ಯೂನತೆಗಳು ಉಂಟಾದಲ್ಲಿ ಸಂಬಂಧಪಟ್ಟ ಪ್ರಾದೇಶಿಕ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆಯವರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

ಮೇಲೆ ಅನುದಾನಕ್ಕೆ ಒಳಪಡಿಸಿರುವ **ಎಸ್.ಡಿ.ಎಂ. ಕಾನೂನು ಕಾಲೇಜು, ಮಂಗಳೂರು** ವೇತನಾನುದಾನದ ವೆಚ್ಚವನ್ನು ಕಾನೂನು ಇಲಾಖೆಯ ಲೆಕ್ಕ ಶೀರ್ಷಿಕೆ ಸಂಖ್ಯೆ: 2014–00–105–0–15 Private Aided Law Colleges-101-Grant -in aid Schemes (Plan) ರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 133 ವೆಚ್ಚ–10/2016, ದಿನಾಂಕ:21.06.2016ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಸ್. ಸುಧಾಮಣಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ. (ಮಾನವ ಹಕ್ಕುಗಳು)

P.R.495

SC. 100

## ಕಾನೂನು ಸಚಿವಾಲಯ

**ವಿಷಯ:** **ಜೆ.ಎಸ್.ಎಸ್. ಕಾನೂನು ಕಾಲೇಜು, ಮೈಸೂರು** ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಹುದ್ದೆಗಳ ನೇಮಕಾತಿಯನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಲಾ 81 ಕೆಎಲ್ಎಂ 2009, ದಿನಾಂಕ: 28–11–2012.
2. ಸರ್ಕಾರಿ ಆದೇಶ ಸಂಖ್ಯೆ : ಲಾ 34 ಕೆಎಲ್ಎಂ 2013, ದಿನಾಂಕ: 26–08–2015.
3. ಸರ್ಕಾರದ ತಿದ್ದೋಲೆ ಸಂಖ್ಯೆ: ಲಾ 34 ಕೆಎಲ್ಎಂ 2013, ದಿನಾಂಕ: 19–12–2015.
4. ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಾಶಿಇ/16/ಲಾ/ಖಾಕಾಕಾ/2012–13/ನೇವಿ–2, ದಿನಾಂಕ: 23.02.2016.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರಿ ಆದೇಶ ದಿನಾಂಕ: 28.11.2012ರಲ್ಲಿ ಪ್ರೋ. ಮಾಲಿ ಮುದ್ದಣ ವರದಿಯನ್ನಾಧರಿಸಿ ಸರ್ಕಾರವು ಸುಸ್ಥಿತಿಯಲ್ಲಿರುವ ಹಾಗೂ ಸತತವಾಗಿ ಆಯಾ ವಿಶ್ವವಿದ್ಯಾಲಯಗಳಿಗೆ 5 (ಐದು) ವರ್ಷಗಳ ಎಲ್.ಎಲ್.ಬಿ ಕೋರ್ಸು ಅಥವಾ 3 (ಮೂರು) ವರ್ಷಗಳ ಎಲ್.ಎಲ್.ಬಿ ಕೋರ್ಸು ಅಥವಾ ಎರಡೂ ಅವಧಿಯ ಎಲ್.ಎಲ್.ಬಿ ಕೋರ್ಸುಗಳನ್ನು ನಡೆಸಲು ಸಂಯೋಜನೆ ಮಾಡಿಕೊಂಡಿದ್ದ ಒಟ್ಟು 19 ಖಾಸಗಿ ಕಾನೂನು ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಲು ತಾತ್ವಿಕವಾಗಿ ಒಪ್ಪಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಸರ್ಕಾರದ ಅನುದಾನಕ್ಕೆ ಒಳಪಡಿಸಿದ ಖಾಸಗಿ ಕಾನೂನು ಕಾಲೇಜುಗಳ ಪೈಕಿ ಕ್ರಮ ಸಂಖ್ಯೆ: (17)ರ **ಜೆ.ಎಸ್.ಎಸ್ ಕಾನೂನು ಕಾಲೇಜು, ಮೈಸೂರು** ಇಲ್ಲಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ನೇಮಕಾತಿಯನ್ನು ಅನುಮೋದಿಸಲಾಗಿದೆ.

ಸದರಿ ಆದೇಶದಲ್ಲಿ ಕೆಲವೊಂದು ಕಾರಣಕ್ಕಾಗಿ ಬೋಧಕ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸಿರುವುದಿಲ್ಲ, ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸದೇ ಇರುವ ಪ್ರಕರಣಗಳ ಬಗ್ಗೆ ಸಂಬಂಧಪಟ್ಟ ಸಿಬ್ಬಂದಿಗಳು ಈ ಆದೇಶ ಹೊರಡಿಸಿದ ಒಂದು ತಿಂಗಳೊಳಗಾಗಿ ಯುಕ್ತ ಮಾರ್ಗದಲ್ಲಿ ಅಗತ್ಯ ದಾಖಲಾತಿಗಳೊಂದಿಗೆ ಸರ್ಕಾರಕ್ಕೆ ಮನವಿ ಸಲ್ಲಿಸಿದ್ದಲ್ಲಿ, ಅಂತಹ ಮನವಿಗಳನ್ನು ನಿಯಮಾನುಸಾರ ಪರಿಶೀಲಿಸಲಾಗುವುದು ಎಂದು ದಿನಾಂಕ: 26.08.2015ರ ಆದೇಶದಲ್ಲಿ ಸೂಚಿಸಲಾಗಿತ್ತು.

ಅದರಂತೆ, ಮೇಲೆ ಓದಲಾದ (4)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ದಿನಾಂಕ: 26.08.2015ರ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸದೇ ಇರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಬಗ್ಗೆ ಮಾಹಿತಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

**ಜೆ.ಎಸ್.ಎಸ್ ಕಾನೂನು ಕಾಲೇಜು, ಮೈಸೂರು** ಈ ಕಾಲೇಜಿನಲ್ಲಿ ಲಭ್ಯವಿರುವ ಕಾರ್ಯಭಾರಕ್ಕನುಗುಣವಾಗಿ 14 ಬೋಧಕ ಸಿಬ್ಬಂದಿಗಳಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಲಾ 34 ಕೆಎಲ್ಎಂ 2013, ದಿನಾಂಕ:26.08.2015ರಲ್ಲಿ 01–ಪ್ರಾಂಶುಪಾಲರ, 06–ಸಹಾಯಕ ಪ್ರಾಧ್ಯಾಪಕರು, 01–ಗ್ರಂಥಪಾಲಕರ, 01–ದೈ.ಶಿ.ಬೋ. ನೇಮಕಾತಿಯನ್ನು ಅನುಮೋದಿಸಲಾಗಿದೆ. ಉಳಿದಂತೆ 01–ಎಸ್‌ಟಿ ಮತ್ತು 01–ಎಸ್‌ಸಿ ಹಾಗೂ 03–ಜಿಎಂ–ಸಹಾಯಕ ಪ್ರಾಧ್ಯಾಪಕರ ಹುದ್ದೆಗಳು ಖಾಲಿ ಇರುತ್ತವೆ.

ಮೇಲೆ ಓದಲಾದ (4)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ಸಹಾಯಕ ಪ್ರಾಧ್ಯಾಪಕರುಗಳಾದ ಶ್ರೀ ಜೆ.ಸಿ. ರಾಜಣ್ಣ, ಶ್ರೀ ಮಹೇಶ್ ಬಿ.ಪಿ, ಶ್ರೀಮತಿ ಸುಧಾಮಣಿ ಪಿ.ಎಂ. ನಾಗೇಂದ್ರಮೂರ್ತಿ ಎಂ.ಪಿ. ಇವರುಗಳು ನಿಗಧಿತ ವಿದ್ಯಾರ್ಹತೆ ಹೊಂದಿಲ್ಲದೆ ಇರುವುದರಿಂದ ಇವರನ್ನು ವೇತನಾನುದಾನಕ್ಕೆ ಒಳಪಡಿಸಲು ನಿಯಮಗಳಲ್ಲಿ ಅವಕಾಶವಿಲ್ಲವೆಂದು ತಿಳಿಸಿರುತ್ತಾರೆ.

ಸರ್ಕಾರಿ ಆದೇಶ ಸಂಖ್ಯೆ: ಲಾ 34 ಕೆಎಲ್ಎಂ 2013, ದಿನಾಂಕ: 26.08.2015ರ ಆದೇಶದಲ್ಲಿ ಪಿ. ಶಿವಾನಂದ ಭಾರತಿ ಇವರು ಕನಿಷ್ಠ ವಿದ್ಯಾರ್ಹತೆಯಾದ ಎಲ್.ಎಲ್.ಎಂ.ನಲ್ಲಿ ಶೇ. 55 ಕ್ಕಿಂತ ಕಡಿಮೆ ಅಂಕಗಳನ್ನು ಪಡೆದಿರುವುದರಿಂದ ಇವರನ್ನು ವೇತನಾನುದಾನದಿಂದ ಕೈಬಿಡಲಾಗಿತ್ತು. ಸದರಿಯವರು ದಿನಾಂಕ: 01.07.1991 ರಂದು ನೇಮಕಾತಿಯಾಗಿದ್ದು, ಎಲ್.ಎಲ್.ಎಂ. ನಲ್ಲಿ ಶೇ. 52 ಅಂಕ ಪಡೆದಿರುವುದರಿಂದ ಯುಜಿಸಿ ನಿಯಮಗಳ ಆದೇಶ ಸಂಖ್ಯೆ: ಇಡಿ 88 ಯುಎನ್‌ಐ 88, ದಿನಾಂಕ: 30.03.1990 ರನ್ವಯ ರಾಜ್ಯ ವೇತನ ಶ್ರೇಣಿಗೆ ಅರ್ಹರಿರುತ್ತಾರೆ.

ಸರ್ಕಾರಿ ಆದೇಶ ಸಂಖ್ಯೆ: ಲಾ 34 ಕೆಎಲ್ಎಂ 2013, ದಿನಾಂಕ: 26.08.2015ರ ಆದೇಶದಲ್ಲಿ ಸಹಾಯಕ ಪ್ರಾಧ್ಯಾಪಕರಾದ ಶ್ರೀ ಎ.ಟಿ. ಜಗದೀಶ್ ಇವರು ನಿಗಧಿತ ವಿದ್ಯಾರ್ಹತೆಯಾದ ಎನ್‌ಇಟಿ/ಎಸ್‌ಎಲ್‌ಇಟಿ/ಪಿಹೆಚ್‌ಡಿ ಪದವಿ ಪಡೆದಿಲ್ಲವೆಂದು ವೇತನಾನುದಾನದಿಂದ ಕೈಬಿಡಲಾಗಿತ್ತು. ಆದರೆ ಸದರಿಯವರು ನಿಗಧಿತ ವಿದ್ಯಾರ್ಹತೆಯಾದ ಕೆಸೆಟ್ ಹಾಗೂ ನೆಟ್ ಪರೀಕ್ಷೆಯಲ್ಲಿ ದಿನಾಂಕ: 28.04.2014 ಉತ್ತೀರ್ಣರಾಗಿರುತ್ತಾರೆಂದು ಕಾಲೇಜು ಶಿಕ್ಷಣ ಆಯುಕ್ತರು ತಿಳಿಸಿರುತ್ತಾರೆ.

ಸರ್ಕಾರಿ ಆದೇಶ ಸಂಖ್ಯೆ: ಲಾ 34 ಕೆಎಲ್ಎಂ 2013, 26.08.21015ರ ಆದೇಶದಲ್ಲಿ **ಶ್ರೀ ಚಿದಾನಂದ ಎಂ. ಗ್ರಂಥಪಾಲಕರು** ಇವರನ್ನು ರಾಜ್ಯವೇತನ ಶ್ರೇಣಿಯಲ್ಲಿ ವೇತನಾನುದಾನಕ್ಕೆ ಒಳಪಡಿಸಲಾಗಿತ್ತು. ಇವರು ದಿನಾಂಕ: 28.04.2014 ರಂದು ಎಸ್.ಎಲ್.ಇ.ಟಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವುದರಿಂದ ಇವರನ್ನು ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ವೇತನಾನುದಾನಕ್ಕೆ ಒಳಪಡಿಸಬಹುದೆಂದು ಕಾಲೇಜು ಶಿಕ್ಷಣ ಆಯುಕ್ತರು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 34 ಕೆಎಲ್ಎಂ 2013, ಬೆಂಗಳೂರು, ದಿನಾಂಕ: 16.04.2016.**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿನಾಂಕ: 26.08.2015ರಲ್ಲಿ ರಾಜ್ಯವೇತನ ಶ್ರೇಣಿಯಲ್ಲಿ ವೇತನಾನುದಾನಕ್ಕೆ ಒಳಪಡಿಸಲಾಗಿರುವ ಈ ಕೆಳಕಂಡ ಬೋಧಕ ಸಿಬ್ಬಂದಿಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ರಾಜ್ಯ ವೇತನ ಶ್ರೇಣಿಯಿಂದ ಯು.ಜಿ.ಸಿ. ವೇತನ ಶ್ರೇಣಿಗೆ ಪರಿಷ್ಕರಣೆ ಮಾಡಿ ವೇತನಾನುದಾನಕ್ಕೆ ಒಳಪಡಿಸಲಾಗಿದೆ:–

| ಹೆಸರು | ಹುದ್ದೆ | ಈಗಾಗಲೇ ಜಾರಿಯಲ್ಲಿರುವ ವೇತನ ಶ್ರೇಣಿ | ವೇತನ ಶ್ರೇಣಿ |
|---|---|---|---|
| ಚಿದಾನಂದ ಎಂ. | ಗ್ರಂಥಪಾಲಕರು | ರಾಜ್ಯ ವೇತನ ಶ್ರೇಣಿ | ಯುಜಿಸಿ ವೇತನ ಶ್ರೇಣಿ (SLET ವಿದ್ಯಾರ್ಹತೆ ಹೊಂದಿರುತ್ತಾರೆ) |

**ಜೆ.ಎಸ್.ಎಸ್. ಕಾನೂನು ಕಾಲೇಜು, ಮೈಸೂರು** ಇಲ್ಲಿ ಬೋಧಕ ಹುದ್ದೆಗಳಲ್ಲಿ 03–ಸಾಮಾನ್ಯ ಅಭ್ಯರ್ಥಿಗಳ ಹುದ್ದೆಯು ಖಾಲಿ ಇದ್ದು, ಈ ಕೆಳಕಂಡ 02–ಸಹಾಯಕ ಪ್ರಾಧ್ಯಾಪಕರುಗಳನ್ನು ಕೆಳಕಾಣಿಸಿದ ಷರತ್ತುಗಳೊಂದಿಗೆ ವೇತನಾನುದಾನಕ್ಕೆ ಒಳಪಡಿಸಲಾಗಿದೆ.

| ಕ್ರ.ಸಂ | ಹೆಸರು ಶ್ರೀ/ಶ್ರೀಮತಿ | ಹುದ್ದೆ | ಮೀಸಲಾತಿ | ಸೇವೆಗೆ ಸೇರಿದ ದಿನಾಂಕ | ವೇತನ ಶ್ರೇಣಿ |
|---|---|---|---|---|---|
| 1. | ಶಿವಾನಂದ ಭಾರತಿ. ಪಿ | ಸಹಾಯಕ ಪ್ರಾಧ್ಯಾಪಕರು | ಜಿಎಂ | 01.07.1991 | ರಾಜ್ಯ ವೇತನ ಶ್ರೇಣಿ |
| 2. | ಜಗದೀಶ್ ಎ.ಟಿ | ಸಹಾಯಕ ಪ್ರಾಧ್ಯಾಪಕರು | ಜಿ.ಎಂ | 01.08.2012 | ಯು.ಜಿ.ಸಿ ವೇತನ ಶ್ರೇಣಿ (KSET & NET ವಿದ್ಯಾರ್ಹತೆ ಹೊಂದಿರುತ್ತಾರೆ) |

**ಷರತ್ತುಗಳು:**

(1) ಹಿಂದುಳಿದ ವರ್ಗಗಳ ಪ್ರಾತಿನಿಧ್ಯದಲ್ಲಿ ಮೀಸಲಾತಿ ಕೊರತೆಯನ್ನು ಭವಿಷ್ಯತ್ತಿನಲ್ಲಿ ತೆರವಾಗುವ ಎಲ್ಲಾ ಹುದ್ದೆಗಳನ್ನು ಮೀಸಲಾತಿ ಕೊರತೆ ಸರಿದೂಗುವವರೆಗೆ ಸಂಬಂಧಪಟ್ಟ ಮೀಸಲಾತಿ ಅಭ್ಯರ್ಥಿಗಳಿಂದಲೇ ಕಡ್ಡಾಯವಾಗಿ ನೇಮಕಾತಿ ಮಾಡಿಕೊಳ್ಳತಕ್ಕದ್ದು.

(2) ಈ ಕಾಲೇಜಿನ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಗಳ ಶೈಕ್ಷಣಿಕ ಅರ್ಹತೆಗೆ ಸಂಬಂಧಿಸಿದ ಎಲ್ಲಾ ಅಂಕಪಟ್ಟಿ/ಪ್ರಮಾಣ ಪತ್ರಗಳ ಸತ್ಯಾಸತ್ಯತೆಯನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ದೃಢೀಕರಿಸಿಕೊಂಡ ನಂತರವೇ ವೇತನ ಪಾವತಿಗೆ ಕ್ರಮಕೈಗೊಳ್ಳುವುದು.

(3) ಈ ಆದೇಶದನ್ವಯ ವೇತನಾನುದಾನಕ್ಕೆ ಒಳಪಟ್ಟಿರುವ ಬೋಧಕ ಹಾಗೂ ಬೋಧಕೇತರರ ಸಿಬ್ಬಂದಿಗಳಿಗೆ ವೇತನ ಬಿಡುಗಡೆ ಮಾಡುವ ಮುನ್ನ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳ ಅಡಿಯಲ್ಲಿ ನೇಮಕಾತಿ ಹೊಂದಿದ್ದಲ್ಲಿ ಅಂತಹ ಸಿಬ್ಬಂದಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಖಚಿತಪಡಿಸಿಕೊಳ್ಳತಕ್ಕದ್ದು.

(4) ಹುದ್ದೆ ಅನುಮೋದನೆಗೊಂಡಿರುವ ಸಿಬ್ಬಂದಿಯು ಯಾವುದೇ ಹಂತದಲ್ಲಿ ತಮ್ಮ ಹೇಳಿಕೆ/ಅಸತ್ಯವಾದ ಮಾಹಿತಿಯನ್ನು ಒದಗಿಸಿದ್ದಲ್ಲಿ ಅಂತಹ ನೇಮಕಾತಿಯನ್ನು ರದ್ದುಪಡಿಸಲಾಗುವುದು.

(5) ಸಿಬ್ಬಂದಿಗಳ ವೇತನಾನುದಾನವು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.

(6) ದಿನಾಂಕ: 24.12.1998ಕ್ಕಿಂತ ಹಿಂದೆ ನೇಮಕವಾದ ಉಪನ್ಯಾಸಕರುಗಳು ಸೇವಾ ವಿಚ್ಛಿನ್ನತೆಯನ್ನು ಹೊಂದಿರಬಾರದು.

(7) ಮುಂದೆ ತುಂಬಲಾಗುವ ಹುದ್ದೆಗಳಿಗೆ ಸಂಬಂಧಿಸಿದ ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿಯನ್ನು ಪಡೆಯತಕ್ಕದ್ದು.

(8) ಬೋಧಕ ಮತ್ತು ಭೋದಕೇತರ ಸಿಬ್ಬಂದಿಯವರು ಅನುದಾನ ರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ಯಾವುದೇ ಸೇವಾ ಸೌಲಭ್ಯಗಳಿಗೆ ಪರಿಗಣಿಸಲಾಗುವುದಿಲ್ಲ ಎಂಬ ಷರತ್ತಿಗೆ ಬದ್ಧವಾಗಿರುತ್ತೇನೆಂದು ₹.50/–ಛಾಪಾ ಕಾಗದದಲ್ಲಿ ಮುಚ್ಚಳಿಕೆ ಪತ್ರವನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಬರೆಯಿಸಿಕೊಳ್ಳತಕ್ಕದ್ದು.

(9) ಮೇಲಿನ ಆದೇಶದನ್ವಯ ಈ ಕಾಲೇಜಿಗೆ ಸಂಬಂಧಿಸಿದಂತೆ ನೇಮಕವಾಗಿರುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳಿಗೆ ವೇತನಾನುದಾನವನ್ನು ಬಿಡುಗಡೆ ಮಾಡುವ ಮುನ್ನ ನ್ಯಾಯಾಲಯದಲ್ಲಿ ಯಾವುದೇ ವಿಧವಾದ ವ್ಯಾಜ್ಯ/ವಿವಾದ ಬಾಕಿ ಇರುವುದಿಲ್ಲ ಎಂಬುದನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಖಚಿತಪಡಿಸಕೊಳ್ಳತಕ್ಕದ್ದು.

(10) ಸದರಿ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸಿರುವ ಸಿಬ್ಬಂದಿಗಳನ್ನು ಹೆಚ್.ಆರ್.ಎಂ.ಎಸ್. ನಲ್ಲಿ ಅಳವಡಿಸಲು ಅಗತ್ಯ ಕ್ರಮ ಕೈಗೊಳ್ಳುವುದು.

(11) ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾಗುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳನ್ನು ನೇಮಕಾತಿಗಾಗಿ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಿ ಸರ್ಕಾರದ ಪೂರ್ವಾನುಮತಿಯನ್ನು ಪಡೆಯುವುದು.

(12) ಸಂಬಂಧಪಟ್ಟ ಜಂಟಿ ನಿರ್ದೇಶಕರು ಪ್ರತಿ ವರ್ಷವು ವೇತನಾನುದಾನಕ್ಕೆ ಒಳಪಟ್ಟಿರುವ ಕಾಲೇಜಿನ ಆಡಳಿತ ಮಂಡಳಿಯು ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವುದನ್ನು ದೃಢೀಕರಿಸಿದ ನಂತರವೇ ಆಯುಕ್ತಾಲಯದಿಂದ ಅನುದಾನ ಬಿಡುಗಡೆ ಮಾಡತಕ್ಕದ್ದು.

(13) ವೇತನಾನುದಾನ ಬಿಡುಗಡೆಗೆ ಸಂಬಂಧಿಸಿದಂತೆ ಯಾವುದೇ ನ್ಯೂನತೆಗಳು ಉಂಟಾದಲ್ಲಿ ಸಂಬಂಧಪಟ್ಟ ಪ್ರಾದೇಶಿಕ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆಯವರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

ಮೇಲೆ ಅನುದಾನಕ್ಕೆ ಒಳಪಡಿಸಿರುವ **ಜೆ.ಎಸ್.ಎಸ್. ಕಾನೂನು ಕಾಲೇಜು, ಮೈಸೂರು** ವೇತನಾನುದಾನದ ವೆಚ್ಚವನ್ನು ಕಾನೂನು ಇಲಾಖೆಯ ಲೆಕ್ಕ ಶೀರ್ಷಿಕೆ ಸಂಖ್ಯೆ: 2014–00–105–0–15 Private Aided Law Colleges-101-Grant-in aid Schemes (Plan) ರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 90 ವೆಚ್ಚ–10/2016. ದಿನಾಂಕ:12.04.2016ರ ಸಹಮತಿಯನ್ವಯ ಹೊರಡಿಸಲಾಗಿದೆ.

**P.R.496**
**SC. 100**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎಸ್. ಸುಧಾಮಣಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ. (ಮಾನವ ಹಕ್ಕುಗಳು)

## ಕಾನೂನು ಸಚಿವಾಲಯ

**ವಿಷಯ:** **ವುಂಕಿ ಸಣ್ಣರುದ್ರಪ್ಪ ಕಾನೂನು ಕಾಲೇಜು, ಬಳ್ಳಾರಿ ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಹುದ್ದೆಗಳ ನೇಮಕಾತಿಯನ್ನು ಅನುಮೋದಿಸುವ ಬಗ್ಗೆ.**

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಲಾ 81 ಕೆಎಲ್ಎಂ 2009, ದಿನಾಂಕ: 28–11–2012.
2. ಸರ್ಕಾರಿ ಆದೇಶ ಸಂಖ್ಯೆ : ಲಾ 54 ಕೆಎಲ್ಎಂ 2013, ದಿನಾಂಕ: 26–08–2015.
3. ಸರ್ಕಾರದ ತಿದ್ದೋಲೆ ಸಂಖ್ಯೆ: ಲಾ 54 ಕೆಎಲ್ಎಂ 2013, ದಿನಾಂಕ: 18–12–2015.
4. ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಾಶಿಇ/28/ಖಾಕಾಕಾ/2012–13/ನೇವಿ–2, ದಿನಾಂಕ: 02.02.2016.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರಿ ಆದೇಶ ದಿನಾಂಕ: 28.11.2012ರಲ್ಲಿ ಪ್ರೋ. ಮಾಲಿ ಮುದ್ದಣ ವರದಿಯನ್ವಾಧರಿಸಿ ಸರ್ಕಾರವು ಸುಸ್ಥಿತಿಯಲ್ಲಿರುವ ಹಾಗೂ ಸತತವಾಗಿ ಆಯಾ ವಿಶ್ವವಿದ್ಯಾಲಯಗಳಿಗೆ 5 (ಐದು) ವರ್ಷಗಳ ಎಲ್.ಎಲ್.ಬಿ ಕೋರ್ಸು ಅಥವಾ 3 (ಮೂರು) ವರ್ಷಗಳ ಎಲ್.ಎಲ್.ಬಿ ಕೋರ್ಸು ಅಥವಾ ಎರಡೂ ಅವಧಿಯ ಎಲ್.ಎಲ್.ಬಿ ಕೋರ್ಸುಗಳನ್ನು ನಡೆಸಲು ಸಂಯೋಜನೆ ಮಾಡಿಕೊಂಡಿದ್ದ ಒಟ್ಟು 19 ಖಾಸಗಿ ಕಾನೂನು ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಲು ತಾತ್ವಿಕವಾಗಿ ಒಪ್ಪಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಸರ್ಕಾರದ ಅನುದಾನಕ್ಕೆ ಒಳಪಡಿಸಿದ ಖಾಸಗಿ ಕಾನೂನು ಕಾಲೇಜುಗಳ ಪೈಕಿ ಕ್ರಮ ಸಂಖ್ಯೆ: (12)ರ **ವುಂಕಿ ಸಣ್ಣರುದ್ರಪ್ಪ ಕಾನೂನು ಕಾಲೇಜು, ಬಳ್ಳಾರಿ** ಇಲ್ಲಿನ ಬೊಧಕ ಮತ್ತು ಬೋಧಕೇತರ ಸಿಬ್ಬಂದಿಗಳ ನೇಮಕಾತಿಯನ್ನು ಅನುಮೋದಿಸಲಾಗಿದೆ.

ಸದರಿ ಆದೇಶದಲ್ಲಿ ಕೆಲವೊಂದು ಕಾರಣಕ್ಕಾಗಿ ಬೋಧಕ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸಿರುವುದಿಲ್ಲ, ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸದೇ ಇರುವ ಪ್ರಕರಣಗಳ ಬಗ್ಗೆ ಸಂಬಂಧಪಟ್ಟ ಸಿಬ್ಬಂದಿಗಳು ಈ ಆದೇಶ ಹೊರಡಿಸಿದ ಒಂದು ತಿಂಗಳೊಳಗಾಗಿ ಯುಕ್ತ ಮಾರ್ಗದಲ್ಲಿ ಅಗತ್ಯ ದಾಖಲಾತಿಗಳೊಂದಿಗೆ ಸರ್ಕಾರಕ್ಕೆ ಮನವಿ ಸಲ್ಲಿಸಿದ್ದಲ್ಲಿ, ಅಂತಹ ಮನವಿಗಳನ್ನು ನಿಯಮಾನುಸಾರ ಪರಿಶೀಲಿಸಲಾಗುವುದು ಎಂದು ದಿನಾಂಕ: 26.08.2015ರ ಆದೇಶದಲ್ಲಿ ಸೂಚಿಸಲಾಗಿತ್ತು.

ಅದರಂತೆ, ಮೇಲೆ ಓದಲಾದ (4)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ದಿನಾಂಕ: 26.08.2015ರ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸದೇ ಇರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಬಗ್ಗೆ ಮಾಹಿತಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

**ವುಂಕಿ ಸಣ್ಣರುದ್ರಪ್ಪ ಕಾನೂನು ಕಾಲೇಜು, ಬಳ್ಳಾರಿ** ಈ ಕಾಲೇಜು ಇಲ್ಲಿ ಲಭ್ಯವಿರುವ ಕಾರ್ಯಭಾರಕ್ಕನುಗುಣವಾಗಿ 08 ಬೋಧಕ ಸಿಬ್ಬಂದಿಗಳಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಲಾ 54 ಕೆಎಲ್ಎಂ 2013, ದಿನಾಂಕ:26.08.2015ರಲ್ಲಿ 03–ಸಹಾಯಕ ಪ್ರಾಧ್ಯಾಪಕರು, 01–ಗ್ರಂಥಪಾಲಕರ ನೇಮಕಾತಿಯನ್ನು ಅನುಮೋದಿಸಲಾಗಿದೆ. 04–ಸಹಾಯಕ ಪ್ರಾಧ್ಯಾಪಕರು ಹುದ್ದೆಗಳು ಖಾಲಿ ಇದ್ದು, 01–ಎಸ್‌ಟಿ ಮತ್ತು 01–ಎಸ್‌ಸಿ ಹಾಗೂ 02–ಜಿಎಂ ಹುದ್ದೆಗಳಲ್ಲಿ 01–ಪ್ರಾಂಶುಪಾಲರ ಮತ್ತು 01–ದೈ.ಶಿ.ಬೋ. ಹುದ್ದೆಗಳಾಗಿವೆ. ದಿನಾಂಕ: 26.08.2015ರ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸಿರುವ ಎಸ್.ವಿ. ಅರಸೂರ, ಸಹಾಯಕ ಪ್ರಾಧ್ಯಾಪಕರು ಇವರು ದಿನಾಂಕ: 19.09.2015ರಂದು ರಾಜೀನಾಮೆ ನೀಡಿರುವುದರಿಂದ, ಸದರಿ ಕಾಲೇಜಿನಲ್ಲಿ 01–ಸಹಾಯಕ ಪ್ರಾಧ್ಯಾಪಕರ ಹುದ್ದೆಯು ಖಾಲಿ ಇರುತ್ತದೆ.

ಮೇಲೆ ಓದಲಾದ (4)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ಶ್ರೀ ಕೆ.ಎಸ್. ಮಂಜುನಾಥ, ದೈ.ಶಿ.ಭೋ., ಶ್ರೀಮತಿ ಎಸ್. ಭಾರತಿ. ಸಹಾಯಕ ಪ್ರಾಧ್ಯಾಪಕರು ಹಾಗೂ ಶ್ರೀ ಜಿ. ಚಂದ್ರಶೇಖರ್, ಗ್ರಂಥಪಾಲಕರು ಇವರುಗಳು ನಿಗಧಿತ ವಿದ್ಯಾರ್ಹತೆ ಹೊಂದಿಲ್ಲದೆ ಇರುವುದರಿಂದ ಇವರನ್ನು ವೇತನಾನುದಾನಕ್ಕೆ ಒಳಪಡಿಸಲು ನಿಯಮಗಳಲ್ಲಿ ಅವಕಾಶವಿಲ್ಲವೆಂದು ತಿಳಿಸಿರುತ್ತಾರೆ. ಬೋಧಕೇತರ ಹುದ್ದೆಗಳ ಪೈಕಿ 01–ಅಟೆಂಡರ್ ಹುದ್ದೆಯು ಎಸ್‌ಸಿ ಅಭ್ಯರ್ಥಿಗೆ ಮೀಸಲಿರಿಸಿರುವುದರಿಂದ ಶ್ರೀ ಬಸವರಾಜ್, ಅಟೆಂಡರ್ ಇವರನ್ನು ವೇತನಾನುದಾನಕ್ಕೆ ಒಳಪಡಿಸಲು ನಿಯಮಗಳಲ್ಲಿ ಅವಕಾಶವಿಲ್ಲವೆಂದು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ತಿಳಿಸಿರುತ್ತಾರೆ.

ಸರ್ಕಾರಿ ಆದೇಶ ಸಂಖ್ಯೆ: ಲಾ 54 ಕೆಎಲ್ಎಂ 2013, ದಿನಾಂಕ: 26.08.2015ರ ಆದೇಶದಲ್ಲಿ ಕುಮಾರಿ ಸಂಧ್ಯಾ ಎಂ. ಸಹಾಯಕ ಪ್ರಾಧ್ಯಾಪಕರು ಇವರು ನಿಗಧಿತ ವಿದ್ಯಾರ್ಹತೆಯಾದ ಎನ್‌ಇಟಿ/ಎಸ್‌ಎಲ್‌ಇಟಿ/ಪಿಹೆಚ್‌ಡಿ ಪದವಿ ಪಡೆದಿಲ್ಲವೆಂದು ವೇತನಾನುದಾನದಿಂದ ಕೈಬಿಡಲಾಗಿತ್ತು. ಆದರೆ ಸದರಿಯವರು ನಿಗಧಿತ ವಿದ್ಯಾರ್ಹತೆಯಾದ ಪಿಹೆಚ್‌ಡಿ ಪದವಿಯನ್ನು ಫೆಬ್ರವರಿ–2014 ರಲ್ಲಿ ಪಡೆದಿರುತ್ತಾರೆಂದು ಕಾಲೇಜು ಶಿಕ್ಷಣ ಆಯುಕ್ತರು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 54 ಕೆಎಲ್ಎಂ 2013, ಬೆಂಗಳೂರು, ದಿನಾಂಕ: 12.04.2016.**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವುಂಕಿ ಸಣ್ಣರುದ್ರಪ್ಪ ಕಾನೂನು ಕಾಲೇಜು, ಬಳ್ಳಾರಿ ಇಲ್ಲಿ ಬೋಧಕ ಹುದ್ದೆಗಳಲ್ಲಿ 01–ಸಾಮಾನ್ಯ ಅಭ್ಯರ್ಥಿಯ ಹುದ್ದೆಯು ಖಾಲಿ ಇದ್ದು, ಕುಮಾರಿ ಸಂಧ್ಯಾ ಎಸ್., ಸಹಾಯಕ ಪ್ರಾಧ್ಯಾಪಕರು ಇವರನ್ನು ಆದೇಶ ಹೊರಡಿಸಿದ ದಿನಾಂಕದಿಂದ ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ವೇತನಾನುದಾನಕ್ಕೆ ಈ ಕೆಳಕಂಡ ಷರತ್ತುಗಳೊಂದಿಗೆ ವೇತನಾನುದಾನಕ್ಕೆ ಒಳಪಡಿಸಲಾಗಿದೆ.

| ಹೆಸರು | ಹುದ್ದೆ | ಮೀಸಲಾತಿ | ಸೇವೆಗೆ ಸೇರಿದ ದಿನಾಂಕ | ವೇತನ ಶ್ರೇಣಿ |
|---|---|---|---|---|
| ಕುಮಾರಿ ಸಂಧ್ಯಾ ಎಸ್. | ಸಹಾಯಕ ಪ್ರಾಧ್ಯಾಪಕರು | ಜಿ.ಎಂ. | 01.12.2011 | ಯುಜಿಸಿ ವೇತನ ಶ್ರೇಣಿ ((Ph.D ವಿದ್ಯಾರ್ಹತೆ ಹೊಂದಿರುತ್ತಾರೆ) |

**ಷರತ್ತುಗಳು:**

(1) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಕ್ಕೆ ಮೀಸಲಾದ ಹುದ್ದೆಗಳನ್ನು ಈ ಆದೇಶದ ದಿನಂಕದಿಂದ 6 (ಆರು) ತಿಂಗಳೊಳಗಾಗಿ ಭರ್ತಿ ಮಾಡತಕ್ಕದ್ದು. ತಪ್ಪಿದ್ದಲ್ಲಿ ನೀಡಲಾಗಿರುವ ವೇತನಾನುದಾನವು ರದ್ದುಗೊಳ್ಳುತ್ತದೆ.

(2) ಹಿಂದುಳಿದ ವರ್ಗಗಳ ಪ್ರಾತಿನಿಧ್ಯದಲ್ಲಿ ಮೀಸಲಾತಿ ಕೊರತೆಯನ್ನು ಭವಿಷ್ಯತ್ತಿನಲ್ಲಿ ತೆರವಾಗುವ ಎಲ್ಲಾ ಹುದ್ದೆಗಳನ್ನು ಮೀಸಲಾತಿ ಕೊರತೆ ಸರಿದೂಗುವವರೆಗೆ ಸಂಬಂಧಪಟ್ಟ ಮೀಸಲಾತಿ ಅಭ್ಯರ್ಥಿಗಳಿಂದಲೇ ಕಡ್ಡಾಯವಾಗಿ ನೇಮಕಾತಿ ಮಾಡಿಕೊಳ್ಳತಕ್ಕದ್ದು.

(3) ಈ ಕಾಲೇಜಿನ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಗಳ ಶೈಕ್ಷಣಿಕ ಅರ್ಹತೆಗೆ ಸಂಬಂಧಿಸಿದ ಎಲ್ಲಾ ಅಂಕಪಟ್ಟಿ/ಪ್ರಮಾಣ ಪತ್ರಗಳ ಸತ್ಯಾಸತ್ಯತೆಯನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ದೃಢೀಕರಿಸಿಕೊಂಡ ನಂತರವೇ ವೇತನ ಪಾವತಿಗೆ ಕ್ರಮಕೈಗೊಳ್ಳುವುದು.

(4) ಈ ಆದೇಶದನ್ವಯ ವೇತನಾನುದಾನಕ್ಕೆ ಒಳಪಟ್ಟಿರುವ ಬೋಧಕ ಹಾಗೂ ಬೋಧಕೇತರರ ಸಿಬ್ಬಂದಿಗಳಿಗೆ ವೇತನ ಬಿಡುಗಡೆ ಮಾಡುವ ಮುನ್ನ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳ ಅಡಿಯಲ್ಲಿ ನೇಮಕಾತಿ ಹೊಂದಿದ್ದಲ್ಲಿ ಅಂತಹ ಸಿಬ್ಬಂದಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪಾಧಿಕಾರದಿಂದ ಖಚಿತಪಡಿಸಿಕೊಳ್ಳತಕ್ಕದ್ದು.

(5) ಹುದ್ದೆ ಅನುಮೋದನೆಗೊಂಡಿರುವ ಸಿಬ್ಬಂದಿಯು ಯಾವುದೇ ಹಂತದಲ್ಲಿ ತಮ್ಮ ಹೇಳಿಕೆ/ಅಸತ್ಯವಾದ ಮಾಹಿತಿಯನ್ನು ಒದಗಿಸಿದ್ದಲ್ಲಿ ಅಂತಹ ನೇಮಕಾತಿಯನ್ನು ರದ್ದುಪಡಿಸಲಾಗುವುದು.

(6) ಸಿಬ್ಬಂದಿಗಳ ವೇತನಾನುದಾನವು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.

(7) ದಿನಾಂಕ: 24.12.1998ಕ್ಕಿಂತ ಹಿಂದೆ ನೇಮಕವಾದ ಉಪನ್ಯಾಸಕರುಗಳು ಸೇವಾ ವಿಚ್ಛಿನ್ನತೆಯನ್ನು ಹೊಂದಿರಬಾರದು.

(8) ಮುಂದೆ ತುಂಬಲಾಗುವ ಹುದ್ದೆಗಳಿಗೆ ಸಂಬಂಧಿಸಿದ ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿಯನ್ನು ಪಡೆಯತಕ್ಕದ್ದು.

(9) ಬೋಧಕ ಮತ್ತು ಭೋದಕೇತರ ಸಿಬ್ಬಂದಿಯವರು ಅನುದಾನ ರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ಯಾವುದೇ ಸೇವಾ ಸೌಲಭ್ಯಗಳಿಗೆ ಪರಿಗಣಿಸಲಾಗುವುದಿಲ್ಲ ಎಂಬ ಷರತ್ತಿಗೆ ಬದ್ಧವಾಗಿರುತ್ತೇನೆಂದು ₹.50/–ಛಾಪಾ ಕಾಗದದಲ್ಲಿ ಮುಚ್ಚಳಿಕೆ ಪತ್ರವನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಬರೆಯಿಸಿಕೊಳ್ಳತಕ್ಕದ್ದು.

(10) ಮೇಲಿನ ಆದೇಶದನ್ವಯ ಈ ಕಾಲೇಜಿಗೆ ಸಂಬಂಧಿಸಿದಂತೆ ನೇಮಕವಾಗಿರುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳಿಗೆ ವೇತನಾನುದಾನವನ್ನು ಬಿಡುಗಡೆ ಮಾಡುವ ಮುನ್ನ ನ್ಯಾಯಾಲಯದಲ್ಲಿ ಯಾವುದೇ ವಿಧವಾದ ವ್ಯಾಜ್ಯ/ವಿವಾದ ಬಾಕಿ ಇರುವುದಿಲ್ಲ ಎಂಬುದನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಖಚಿತಪಡಿಸಿಕೊಳ್ಳತಕ್ಕದ್ದು.

(11) ಸದರಿ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸಿರುವ ಸಿಬ್ಬಂದಿಗಳನ್ನು ಹೆಚ್.ಆರ್.ಎಂ.ಎಸ್. ನಲ್ಲಿ ಅಳವಡಿಸಲು ಅಗತ್ಯ ಕ್ರಮ ಕೈಗೊಳ್ಳುವುದು.

(12) ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾಗುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳನ್ನು ನೇಮಕಾತಿಗಾಗಿ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಿ ಸರ್ಕಾರದ ಪೂರ್ವಾನುಮತಿಯನ್ನು ಪಡೆಯುವುದು.

(13) ಸಂಬಂಧಪಟ್ಟ ಜಂಟಿ ನಿರ್ದೇಶಕರು ಪ್ರತಿ ವರ್ಷವು ವೇತನಾನುದಾನಕ್ಕೆ ಒಳಪಟ್ಟಿರುವ ಕಾಲೇಜಿನ ಆಡಳಿತ ಮಂಡಳಿಯು ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವುದನ್ನು ದೃಢೀಕರಿಸಿದ ನಂತರವೇ ಆಯುಕ್ತಾಲಯದಿಂದ ಅನುದಾನ ಬಿಡುಗಡೆ ಮಾಡತಕ್ಕದ್ದು.

(14) ವೇತನಾನುದಾನ ಬಿಡುಗಡೆಗೆ ಸಂಬಂಧಿಸಿದಂತೆ ಯಾವುದೇ ನ್ಯೂನತೆಗಳು ಉಂಟಾದಲ್ಲಿ ಸಂಬಂಧಪಟ್ಟ ಪ್ರಾದೇಶಿಕ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆಯವರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

ಮೇಲೆ ಅನುದಾನಕ್ಕೆ ಒಳಪಡಿಸಿರುವ ವುಂಕಿ ಸಣ್ಣರುದ್ರಪ್ಪ. ಕಾನೂನು ಕಾಲೇಜು, ಬಳ್ಳಾರಿ ವೇತನಾನುದಾನದ ವೆಚ್ಚವನ್ನು ಕಾನೂನು ಇಲಾಖೆಯ ಲೆಕ್ಕ ಶೀರ್ಷಿಕೆ ಸಂಖ್ಯೆ: 2014–00–105–0–15 Private Aided Law Colleges-101-Grant-in aid Schemes (Plan) ರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 91 ವೆಚ್ಚ–10/2016. ದಿನಾಂಕ:04.04.2016ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎಸ್. ಸುಧಾಮಣಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ. (ಮಾನವ ಹಕ್ಕುಗಳು)

**P.R.497**
**SC. 100**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ (ವ್ಯವಹಾರ ನಿರ್ವಹಣೆ) ನಿಯಮಾವಳಿಗಳು, 1977ರ ಅಡಿಯಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅಧಿಕಾರಿಗಳಿಗೆ ಅಧಿಕಾರ ವಿನಿಯೋಗದ ಬಗ್ಗೆ.

**ಓದಲಾಗಿದೆ:**

1. ಕರ್ನಾಟಕ ಸರ್ಕಾರ (ವ್ಯವಹಾರ ನಿರ್ವಹಣೆ) ನಿಯಮಾವಳಿಗಳು, 1977.
2. ಸರ್ಕಾರಿ ಆದೇಶ ಸಂ: ಅಪಜೀ 166 ಸಿಆರ್‌ಎಸ್ 1996, ಬೆಂಗಳೂರು, ದಿನಾಂಕ:08-06-1998.
3. ಸರ್ಕಾರದ ಪ್ರಧಾನ ಕಾಯದರ್ಶಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಸುತ್ತೋಲೆ ಸಂಖ್ಯೆ: ಅಪಜೀ 200 ಸಿಆರ್‌ಎಸ್ 2013, ದಿನಾಂಕ: 11-09-2013

**ಪ್ರಸ್ತಾವನೆ:-**

ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 08-06-1998ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ (ವ್ಯವಹಾರ ನಿರ್ವಹಣೆ) ನಿಯಮಾವಳಿಗಳು, 1977ರ ನಿಯಮ 6ರ ಉಪ ನಿಯಮ (2) ಹಾಗೂ ನಿಯಮ 30ರ ಉಪ ನಿಯಮ (2) ಹಾಗೂ (3)ರನ್ವಯ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ವಿವಿಧ ವಿಭಾಗದ ಅಧಿಕಾರಿಗಳಿಗೆ ಅನುಬಂಧದಲ್ಲಿ ತೋರಿಸಿರುವಂತೆ ಅಧಿಕಾರ ವಿನಿಯೋಗ ಮಾಡಿ ಆದೇಶವನ್ನು ಹೊರಡಿಸಲಾಗಿತ್ತು.

ಸದರಿ ಆದೇಶದಲ್ಲಿ ವಿನಿಯೋಗ ಮಾಡಲಾಗಿರುವ ಅಧಿಕಾರಗಳನ್ನು ನಿಯಮಗಳಿಗೆ ವಿರೋಧವಾಗದಂತೆ ಹಾಗೂ ಕ್ರಮಬದ್ಧವಾಗಿ ಬಳಸಬೇಕು; ಸಮಾಲೋಚನೆ ಮಾಡಬೇಕಾದಲ್ಲಿ ಮತ್ತು ಸಹಮತಿ ಅಗತ್ಯವಿದ್ದಲ್ಲಿ ಅದನ್ನು ಪಡೆದು ಅಧಿಕಾರ ಉಪಯೋಗಿಸಬೇಕು; ಈ ಆದೇಶ ಆರ್ಥಿಕ ಇಲಾಖೆ, ಕಾನೂನು ಇಲಾಖೆ ಮತ್ತು ಇತರೆ ಇಲಾಖೆಗಳೊಂದಿಗೆ ಸಮಾಲೋಚನೆ/ ಒಪ್ಪಿಗೆ ಅವಕಾಶಗಳನ್ನು ಪಾಲಿಸುವ ಹಾಗೂ ಮುಖ್ಯ ಮಂತ್ರಿಗಳ, ಸಚಿವ ಸಂಪುಟದ ಹಾಗೂ ರಾಜ್ಯಪಾಲರ ಒಪ್ಪಿಗೆ ಪಡೆಯುವ ಅಗತ್ಯತೆಗಳನ್ನು ಪೂರೈಸುವ ಷರತ್ತಿಗೊಳ್ಳಪಟ್ಟಿರುತ್ತದೆಂದು ಸದರಿ ಆದೇಶದಲ್ಲಿ ತಿಳಿಸಲಾಗಿರುತ್ತದೆ. ಸದರಿ ಆದೇಶದಲ್ಲಿ ಇನ್ನೂ ಕೆಲವು ಷರತ್ತುಗಳನ್ನು ವಿಧಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ದಿನಾಂಕ: 11-09-2013ರ ಸುತ್ತೋಲೆಯಲ್ಲಿ ಅಧಿಕಾರ ವಿನಿಯೋಗ ವ್ಯವಸ್ಥೆಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಲಾಗಿದೆ.

ದಿನಾಂಕ: 11-09-2013ರ ಸುತ್ತೋಲೆಯಲ್ಲಿ ಅಧಿಕಾರ ವಿನಿಯೋಗ ವ್ಯವಸ್ಥೆಯಲ್ಲಿ ಮಾಡಲಾಗಿದ್ದ ಬದಲಾವಣೆಗಳನ್ನು ಹಿಂತೆಗೆದುಕೊಂಡು ದಿನಾಂಕ: 08-06-1998ರ ಆದೇಶದಲ್ಲಿ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅಧಿಕಾರಿಗಳಿಗೆ ಮಾಡಲಾಗಿರುವ ಅಧಿಕಾರ ವಿನಿಯೋಗ ವ್ಯವಸ್ಥೆಯನ್ನು ಪುನರ್‌ಸ್ಥಾಪಿಸಲು ನಿರ್ಣಯಿಸಲಾಗಿದೆ. ಅದರಂತೆ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 58 ಸಿಆರ್‌ಎಸ್ 2016, ಬೆಂಗಳೂರು, ದಿನಾಂಕ: 17-06-2016.**

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅಧಿಕಾರಿಗಳಿಗೆ ಅಧಿಕಾರ ವಿನಿಯೋಗದಲ್ಲಿ ಬದಲಾವಣೆ ಮಾಡಲಾಗಿದ್ದ ಮೇಲೆ ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ದಿನಾಂಕ: 11-09-2013ರ ಸುತ್ತೋಲೆಯನ್ನು ಹಿಂತೆಗೆದುಕೊಂಡು ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅರಣ್ಯ ವಿಭಾಗದ ಅಧಿಕಾರಿಗಳಿಗೆ ದಿನಾಂಕ: 08-06-1998ರ ಆದೇಶ ಮತ್ತು ಅನುಬಂಧದಲ್ಲಿ ಮಾಡಲಾಗಿದ್ದ ಅಧಿಕಾರ ವಿನಿಯೋಗವನ್ನು ಪುನರ್‌ಸ್ಥಾಪಿಸಲಾಗಿದೆ.

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ)ಗೆ ಹಾಗೂ ಪರಿಸರ ಮತ್ತು ಜೀವಿಶಾಸ್ತ್ರ ವಿಭಾಗದ ಅಧಿಕಾರಿಗಳಿಗೆ ಕೂಡ ದಿನಾಂಕ: 08-06-1998ರ ಆದೇಶದಲ್ಲಿ ಕಾರ್ಯದರ್ಶಿ (ಅರಣ್ಯ) ಮತ್ತು ವಿಭಾಗದ ಅಧಿಕಾರಿಗಳಿಗೆ ವಿನಿಯೋಗಿಸಿದ ಅಧಿಕಾರದಂತೆ, ಪರಿಸರ ಮತ್ತು ಜೀವಿಶಾಸ್ತ್ರ ವಿಷಯಗಳಿಗೆ ಸಂಬಂಧಿಸಿದಂತೆ ಸಮಾನಾಂತರ ಸಂದರ್ಭಗಳಲ್ಲಿ ಅಂತಹದ್ದೇ ಅಧಿಕಾರವನ್ನು ಚಲಾಯಿಸ ತಕ್ಕದ್ದು.

ಈ ಅಧಿಕಾರ ವಿನಿಯೋಗವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ:-

1. ಈ ಅಧಿಕಾರಗಳನ್ನು ನಿಯಮಗಳಿಗೆ ವಿರೋಧವಾಗದಂತೆ ಹಾಗೂ ಕ್ರಮಬದ್ಧವಾಗಿ ಬಳಸಬೇಕು. ಸಮಾಲೋಚನೆ ಮಾಡಬೇಕಾದಲ್ಲಿ ಮತ್ತು ಸಹಮತಿ ಅಗತ್ಯವಿದ್ದಲ್ಲಿ ಅದನ್ನು ಪಡೆದು ಅಧಿಕಾರ ಉಪಯೋಗಿಸಬೇಕು. ಆರ್ಥಿಕ ಇಲಾಖೆ, ಕಾನೂನು ಇಲಾಖೆ ಮತ್ತು ಇತರೆ ಇಲಾಖೆಗಳೊಂದಿಗೆ ಸಮಾಲೋಚನೆ ಮತ್ತು ಒಪ್ಪಿಗೆ ಪಡೆಯುವ ಅಗತ್ಯತೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು. ಅದೇ ರೀತಿ ಮಾನ್ಯ ಮುಖ್ಯಮಂತ್ರಿಗಳು, ಇಲಾಖಾ ಮಂತ್ರಿಗಳು, ಸಚಿವ ಸಂಪುಟ ಹಾಗೂ ಮಾನ್ಯ ರಾಜ್ಯಪಾಲರ ಒಪ್ಪಿಗೆ/ಅನುಮೋದನೆ ಪಡೆಯಬೇಕಾದ ಅಗತ್ಯತೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
2. ಅನುಬಂಧದಲ್ಲಿ ಮಾಡಲಾಗಿರುವ ಅಧಿಕಾರ ವಿನಿಯೋಗವನ್ನು ಅಧಿಕಾರಿಗಳು ಆಡಳಿತಾತ್ಮಕ ಮತ್ತು ಆರ್ಥಿಕ ಅಧಿಕಾರಗಳ ಪ್ರತ್ಯಾಯೋಜನೆ ಸಂಬಂಧದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಕಾಲಕಾಲಕ್ಕೆ ಹೊರಡಿಸಿರುವ ಆದೇಶಗಳು/ಸುತ್ತೋಲೆಗಳು ಮತ್ತು ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
3. ಅನುಬಂಧದಲ್ಲಿ ತೋರಿಸಿರುವ ವಿಷಯಗಳಲ್ಲದ ಪ್ರಕರಣಗಳನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಸರ್ಕಾರದ ಕಾರ್ಯದರ್ಶಿಗಳು (ಅರಣ್ಯ) ಮತ್ತು ಸರ್ಕಾರದ ಕಾರ್ಯದರ್ಶಿ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರುಗಳು ಕರ್ನಾಟಕ ಸರ್ಕಾರ (ವ್ಯವಹಾರ ನಿರ್ವಹಣೆ) ನಿಯಮಾವಳಿಗಳು, 1977ರ ನಿಯಮ 30(2) ರಲ್ಲಿ ನಿರ್ದೇಶಿಸಿರುವಂತೆ ಇತ್ಯರ್ಥಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ. ವಿಜಯಭಾಸ್ಕರ್**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**P.R.540**
**SC-50**

**ಸಹಕಾರ ಸಚಿವಾಲಯ**

**ವಿಷಯ:** 2016–17ನೇ ಸಾಲಿಗೆ ರಾಜ್ಯದ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ಶೂನ್ಯ ಬಡ್ಡಿ ದರದಲ್ಲಿ ₹. 3 ಲಕ್ಷಗಳವರೆಗೆ ಅಲ್ಪಾವಧಿ ಕೃಷಿ ಸಾಲ ನೀಡಲು ಆದೇಶ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಸಇ 115 ರರವಿ 2016, ಬೆಂಗಳೂರು, ದಿನಾಂಕ: 26–04–2016.
2. ಸರ್ಕಾರಿ ಆದೇಶ ಸಂ: ಸಇ 183 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ: 17–11–2015.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್/ ಸಿಆರ್‌ಡಿ/ಸಿಎಬಿ–1/9/2016–17, ದಿನಾಂಕ: 11–05–2016.

**ಪ್ರಸ್ತಾವನೆ:–**

2016–17ನೇ ಸಾಲಿನ ಆಯವ್ಯಯ ಭಾಷಣದಲ್ಲಿ ₹. 3 ಲಕ್ಷಗಳವರೆಗಿನ ಅಲ್ಪಾವಧಿ ಕೃಷಿ ಸಾಲವನ್ನು ಶೂನ್ಯ ಬಡ್ಡಿ ದರದಲ್ಲಿ ಹಾಗೂ ₹. 10 ಲಕ್ಷಗಳವರೆಗಿನ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲವನ್ನು ಶೇ. 3ರ ಬಡ್ಡಿದರದಲ್ಲಿ ವಿತರಿಸುವ ಯೋಜನೆ ಮುಂದುವರೆಸಲಾಗುವುದೆಂದು ಘೋಷಿಸಲಾಗಿರುತ್ತದೆ.

ಮೇಲೆ ಓದಲಾದ (1)ರ ಆದೇಶದಲ್ಲಿ ಈ ಯೋಜನೆಯನ್ನು 2016–17ನೇ ಸಾಲಿನಲ್ಲಿ ಮುಂದುವರೆಸಲು ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (2)ರ ಆದೇಶದಲ್ಲಿ 2015–16ನೇ ಸಾಲಿಗೆ ಅಲ್ಪಾವಧಿ ಕೃಷಿ ಸಾಲ ವಿತರಣೆ ಕುರಿತು ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2016–17ನೇ ಸಾಲಿಗೆ ರಾಜ್ಯದ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ಶೂನ್ಯ ಬಡ್ಡಿದರದಲ್ಲಿ ₹. 3 ಲಕ್ಷಗಳವರೆಗೆ ಅಲ್ಪಾವಧಿ ಕೃಷಿ ಸಾಲ ನೀಡುವ ಯೋಜನೆಗೆ ಮೇಲೆ ಓದಲಾದ (2)ರ ಆದೇಶದಲ್ಲಿನ ಷರತ್ತುಗಳ ಪೈಕಿ ಕೇಂದ್ರ ಸರ್ಕಾರದಿಂದ ಸಂಘಗಳಿಗೆ ನೀಡಲಾಗುವ ಸಬ್‌ವೆನ್ಷನ್ ಮತ್ತು ರೈತರಿಗೆ ನೀಡಲಾಗಿರುವ ಪ್ರೋತ್ಸಾಹಧನವನ್ನು ರಾಜ್ಯ ಸರ್ಕಾರದ ಯೋಜನೆಗೆ ಅಳವಡಿಸಿಕೊಳ್ಳುವ ಹಾಗೂ ಜಿಲ್ಲಾ ಸಹಕಾರ ಬ್ಯಾಂಕುಗಳಿಂದ ಮಂಜೂರಾದ ಶೇ. 50 ಹೆಚ್ಚುವರಿ ಮೊತ್ತದ ಬದಲಿಗೆ ಶೇ. 75ರಷ್ಟು ಹೆಚ್ಚುವರಿ ಮೊತ್ತವನ್ನು ಹೊಸ ರೈತರಿಗೆ ವಿತರಿಸುವುದು ಎಂಬುದನ್ನು ಅಳವಡಿಸಿ/ಮಾರ್ಪಡಿಸಿ ಸರ್ಕಾರಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 243 ಸಿಎಲ್ಎಸ್ 2016, ದಿನಾಂಕ: 23–07–2016**

ರಾಜ್ಯದ ರೈತರಿಗೆ ಸಹಕಾರಿ ಸಂಸ್ಥೆಗಳು ಶೂನ್ಯ ಬಡ್ಡಿದರದಲ್ಲಿ ₹. 3 ಲಕ್ಷಗಳವರೆಗೆ ಅಲ್ಪಾವಧಿ ಕೃಷಿ ಸಾಲ ನೀಡುವ ಯೋಜನೆಯನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಜಾರಿಗೊಳಿಸಲು ಸರ್ಕಾರ ಮಂಜೂರಾತಿ ನೀಡಿ ಆದೇಶಿಸಿದೆ.

**ಷರತ್ತುಗಳು:**

1. ಈ ಯೋಜನೆಯು ಗೊತ್ತುಪಡಿಸಿದ ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು ಅಂದರೆ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು, ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು, ಟಿಬೇಟಿಯನ್ ಸಹಕಾರ ಸಂಸ್ಥೆಗಳು, ಕೃಷಿ ಮತ್ತು ಕೃಷಿ ಸಂಬಂಧಿತ ಅಲ್ಪಾವಧಿ ಸಾಲಗಳನ್ನು ನೀಡುತ್ತಿರುವ ಲ್ಯಾಂಪ್ಸ್ ಸಹಕಾರ ಸಂಘಗಳು, ಪಿಕಾರ್ಡ್ ಬ್ಯಾಂಕುಗಳು ಮತ್ತು ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯಡಿ ಅರ್ಹ ಎಂದು ಗುರುತಿಸುವ ಇತರೆ ಸಹಕಾರಿ ಸಂಸ್ಥೆಗಳು. (ಪಟ್ಟಣ ಸಹಕಾರ ಬ್ಯಾಂಕುಗಳು ನೀಡುವ ಸಾಲಗಳಿಗೆ ಈ ಯೋಜನೆ ಅನ್ವಯಿಸುವುದಿಲ್ಲ.)
2. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಸ್ಥಗಿತ/ಸಮಾಪನೆಗೊಂಡಿದ್ದಲ್ಲಿ ಅಂತಹ ಕಾರ್ಯವ್ಯಾಪ್ತಿಯಲ್ಲಿ ಮಾತ್ರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಅಲ್ಪಾವಧಿ ಕೃಷಿ ಸಾಲಗಳನ್ನು ವಿತರಿಸತಕ್ಕದ್ದು. ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ನೇರವಾಗಿ ವಿತರಿಸಿದ ಸಾಲಗಳಿಗೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ಅನ್ವಯವಾಗುವ ಬಡ್ಡಿ ಸಹಾಯಧನದ ದರಕ್ಕಿಂತ ಶೇ. 2ರಷ್ಟು ಕಡಿಮೆ ಬಡ್ಡಿ ಸಹಾಯಧನ ಅನ್ವಯವಾಗುವುದು.
3. ಒಂದು ನಿರ್ದಿಷ್ಟ ಬ್ಯಾಂಕಿನ ವ್ಯಾಪ್ತಿಯ ಒಂದು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ತನ್ನ ವ್ಯಾಪ್ತಿಯ ರೈತರಿಗೆ ಸಾಲ ವಿತರಿಸಲು ವಿಫಲವಾದಲ್ಲಿ ಅಂತಹ ಪ್ರಕರಣಗಳಲ್ಲಿ ಪಕ್ಕದ ಜಿಲ್ಲೆಯ ಕೇಂದ್ರ ಸಹಕಾರ ಬ್ಯಾಂಕಿನ ಅಥವಾ ಅಪೆಕ್ಸ್ ಬ್ಯಾಂಕಿನ ಮೂಲಕ ಸಾಲ ವಿತರಿಸುವ ವ್ಯವಸ್ಥೆಯನ್ನು ಸಹಕಾರ ಸಂಘಗಳ ನಿಬಂಧಕರು ಮಾಡಲು ಕ್ರಮವಹಿಸತಕ್ಕದ್ದು.
4. ಸ್ಕೇಲ್ ಆಫ್ ಫೈನಾನ್ಸ್ ಮತ್ತು ಬೆಳೆ ವಿಮೆ ಆಧಾರದ ಮೇಲೆ ಮಂಜೂರಾದ ಸಾಲದ ಮಿತಿಗೆ ಮಾತ್ರ ಬಡ್ಡಿ ರಿಯಾಯಿತಿಯು ಅನ್ವಯವಾಗುವುದು. ಇತರೆ ಉದ್ದೇಶಗಳಿಗೆ (ಉದಾ: Post harvest ಉದ್ದೇಶಗಳು ಇತ್ಯಾದಿಗಳಿಗೆ ನೀಡುವ ಹೆಚ್ಚುವರಿ ಸಾಲಗಳಿಗೆ ನೀಡಿರುವ ಹೆಚ್ಚುವರಿ ಸಾಲದ ಮೊತ್ತಕ್ಕೆ ರಿಯಾಯಿತಿಯು ಇರುವುದಿಲ್ಲ).
5. ಕೇಂದ್ರ ಸರ್ಕಾರದಿಂದ ಸಂಘಗಳಿಗೆ ನೀಡಲಾಗಿರುವ ಸಬವೆಷ್ಷನ್ ಮತ್ತು ರೈತರಿಗೆ ನೀಡಲಾಗಿರುವ ಪ್ರೋತ್ಸಾಹಧನವನ್ನು ರಾಜ್ಯ ಸರ್ಕಾರದ ಯೋಜನೆಗೆ ಅಳವಡಿಸಿಕೊಂಡು ಪ್ರತ್ಯೇಕವಾಗಿ ಬಡ್ಡಿ ಸಹಾಯಧನದ ದರವನ್ನು ನಿಗಧಿ ಪಡಿಸಲಾಗುವುದು.
6. ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳಿಗೆ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳಿಂದ ಮಂಜೂರಾದ ಶೇ. 75 ರಷ್ಟು ಹೆಚ್ಚುವರಿ ಸಾಲದ ಮೊತ್ತವನ್ನು ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳ ಮೂಲಕ ರಿಯಾಯಿತಿ ಬಡ್ಡಿ ದರದಲ್ಲಿ ಇರುವರೆಗೂ ಸಾಲ ಪಡೆಯದೇ ಇರುವ ಹೊಸ ಸದಸ್ಯರಿಗೆ ನೀಡುವುದು ಪ್ಯಾಕ್ಸ್‌ಗಳ ಕಾರ್ಯ ವ್ಯಾಪ್ತಿಯಲ್ಲಿನ ಎಲ್ಲಾ ಹೊಸ ರೈತ ಸದಸ್ಯರಿಗೆ ಸಾಲ ನೀಡಿದ ನಂತರ ಉಳಿದಲ್ಲಿ ಹೆಚ್ಚುವರಿ ಸಾಲದ ಮೊತ್ತವನ್ನು ಹಳೆಯ ಸಾಲಗಾರ ರೈತರಿಗೆ ಸಾಲ ನೀಡಲು ಬಳಸತಕ್ಕದ್ದು.
7. ಸಾಲ ನೀಡುವ ಸಂಸ್ಥೆಗಳು ಪ್ರಾಥಮಿಕ ಸಹಕಾರಿ ಸಂಸ್ಥೆಗಳಿಂದ ಮತ್ತು ಪ್ರಾಥಮಿಕ ಸಹಕಾರಿ ಸಂಸ್ಥೆಗಳು ರೈತ ಸದಸ್ಯರಿಂದ ಯಾವುದೇ ಪ್ರಕ್ರಿಯಾ ಶುಲ್ಕ (Processing Fee) ಅಥವಾ ಸೇವಾ ಶುಲ್ಕ (Service Fee) ಹೆಸರಿನಲ್ಲಿ ಯಾವುದೇ ಹಣವನ್ನು ಸಂಗ್ರಹಿಸತಕ್ಕದ್ದಲ್ಲ.

8. "ಶೂನ್ಯ" ಬಡ್ಡಿ ದರವು ₹. 3.00 ಲಕ್ಷದವರೆಗಿನ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ. ₹. 3 ಲಕ್ಷಗಳಿಗಿಂತ ಹೆಚ್ಚಿನ ಸಾಲಗಳ ಸಂಪೂರ್ಣ ಮೊತ್ತಕ್ಕೆ ಸಾಮಾನ್ಯ ಬಡ್ಡಿ ದರ ಅನ್ವಯವಾಗುತ್ತದೆ.

9. ಈ ಬಡ್ಡಿ ದರವು ದಿನಾಂಕ: 01–04–2016ರಿಂದ ದಿನಾಂಕ: 31–03–2017ರವರೆಗೆ ನೀಡಲಾದ (sanctioned and disbursed) ಕೃಷಿ ಅಲ್ಪಾವಧಿ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ.

10. ರೈತರು ಸಹಕಾರಿ ಸಂಸ್ಥೆಗಳಿಗೆ ಮರುಪಾವತಿ ಗಡುವಿನೊಳಗಾಗಿ ಮರುಪಾವತಿಸಿದರೆ ಮಾತ್ರ ಈ ಸೌಲಭ್ಯವು ದೊರೆಯುತ್ತದೆ. ನಿಗದಿತ ಗಡುವಿನ ನಂತರ ಮರುಪಾವತಿಸಿದ ಸಾಲಗಳಿಗೆ ಸಾಲ ಪಡೆದ ದಿನಾಂಕದಿಂದ ಸಾಮಾನ್ಯ ಬಡ್ಡಿ ದರದಲ್ಲಿ ರೈತರು ಸಾಲ ಮರುಪಾವತಿಸಲು ಜವಾಬ್ದಾರರಾಗುತ್ತಾರೆ. ಬಡ್ಡಿ ರಿಯಾಯಿತಿಯನ್ನು ಗಡವು ದಿನಾಂಕ ಅಥವಾ ಸಾಲ ಮರುಪಾವತಿಸಲಾದ ದಿನಾಂಕ ಇವುಗಳಲ್ಲಿ ಯಾವುದು ಮೊದಲೋ ಆ ದಿನಾಂಕದವರೆಗೆ ಪಾವತಿಸಲಾಗುವುದು.

11. ಈ ಯೋಜನೆಯು ಸಹಕಾರಿ ಸಂಸ್ಥೆಗಳು ನೀಡುವ ಕೃಷಿಯೇತರ (Non agricultural loans) ಸಾಲಗಳಿಗೆ ಅನ್ವಯವಾಗುವುದಿಲ್ಲ.

12. ಅಲ್ಪಾವಧಿ ಬೆಳೆ ಸಾಲಗಳನ್ನು ನೀಡುತ್ತಿರುವ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳು, ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಟಿಬೇಟಿಯನ್ ಸಹಕಾರ ಸಂಘಗಳು, ಲ್ಯಾಂಪ್ಸ್‌ಗಳಿಗೆ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನ ಮೂಲಕ ಪಿಕಾರ್ಡ್ ಬ್ಯಾಂಕುಗಳು ಕಸ್ಕಾರ್ಡ್ ಬ್ಯಾಂಕಿನ ಮೂಲಕ ಬಡ್ಡಿ ಸಹಾಯಧನವನ್ನು ಬಿಡುಗಡೆ ಮಾಡಲಾಗುತ್ತದೆ.

13. ಒಂದು ವೇಳೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ತಮ್ಮ ಸಂಪನ್ಮೂಲಗಳನ್ನು ಕೃಷಿ ಅಲ್ಪಾವಧಿ ಸಾಲಗಳಲ್ಲಿ ತೊಡಗಿಸಿದಾಗ ಅಂತಹ ಸಾಲಗಳ ಪ್ರಮಾಣಕ್ಕನುಗುಣವಾಗಿ ರಾಜ್ಯ/ಕೇಂದ್ರ ಸರ್ಕಾರಗಳಿಂದ ದೊರೆಯುವ ಬಡ್ಡಿ ಸಹಾಯಧನವನ್ನು ಡಿಸಿಸಿ ಬ್ಯಾಂಕುಗಳು ಗೊತ್ತುಪಡಿಸಿದ ಶೇಕಡ ಪ್ರಮಾಣಕ್ಕನುಗುಣವಾಗಿ ಆಯಾ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ವರ್ಗಾಯಿಸತಕ್ಕದ್ದು.

14. ಪಿಕಾರ್ಡ್ ಬ್ಯಾಂಕುಗಳು ಇಂತಹ ಸಾಲಗಳನ್ನು ತನ್ನ ಸ್ವಂತ ಸಂಪನ್ಮೂಲದಿಂದ ಒದಗಿಸಿದಾಗ ಅಷ್ಟರಮಟ್ಟಿಗೆ ಕಸ್ಕಾರ್ಡ್ ಬ್ಯಾಂಕ್ ಸರ್ಕಾರದಿಂದ ಪಡೆಯುವ ಬಡ್ಡಿ ಸಹಾಯಧನವನ್ನು ಪಿಕಾರ್ಡ್ ಬ್ಯಾಂಕುಗಳಿಗೆ ಕಡ್ಡಾಯವಾಗಿ ಒದಗಿಸತಕ್ಕದ್ದು.

15. ಒಂದು ಪಕ್ಷ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳ ಬದಲಾಗಿ ವಾಣಿಜ್ಯ ಬ್ಯಾಂಕುಗಳಿಂದ ಕೃಷಿ ಸಾಲ ಪಡೆದು ರೈತರಿಗೆ ವಿತರಣೆ ಮಾಡಿದಲ್ಲಿ ಸರ್ಕಾರದಿಂದ ಬಿಡುಗಡೆಯಾಗುವ ಬಡ್ಡಿ ಸಹಾಯಧನದ ಹೊಂದಾಣಿಕೆ ವಿಷಯದಲ್ಲಿ ಮೇಲೆ ಸೂಚಿಸಿದ ನಿಯಮಗಳನ್ನೇ ಪಾಲಿಸತಕ್ಕದ್ದು.

16. ಪತ್ತಿನ ಸಹಕಾರ ಸಂಘಗಳು/ಬ್ಯಾಂಕುಗಳು ಬಡ್ಡಿ ಸಹಾಯಧನದ ಬಿಲ್ಲುಗಳನ್ನು ಸಂಬಂಧಪಟ್ಟ ಸಾಲಗಳ ವಸೂಲಾತಿಯ ಪ್ರಮಾಣವನ್ನು ಆಧರಿಸಿ ಪ್ರತಿ ತ್ರೈಮಾಸಿಕವಾಗಿ ಕ್ಲೇಮು ಬಿಲ್ಲುಗಳನ್ನು ಸಿದ್ದಪಡಿಸಿ ಗೊತ್ತುಪಡಿಸಿದ ಮಾರ್ಗದಲ್ಲಿ ನಿಬಂಧಕರ ಮಂಜೂರಾತಿಗಾಗಿ ಈ ಕೆಳಕಾಣಿಸಿದಂತೆ ಬೇಡಿಕೆಯನ್ನು ಸಲ್ಲಿಸತಕ್ಕದ್ದು.

(i) ಸಹಕಾರ ಸಂಘ/ಬ್ಯಾಂಕುಗಳಿಗೆ ಸಂಬಂಧಪಟ್ಟಂತೆ ತ್ರೈಮಾಸಿಕವಾಗಿ ಆಯಾ ಸಂಘ/ಬ್ಯಾಂಕುಗಳ ಕಾರ್ಯ–ನಿರ್ವಹಣಾಧಿಕಾರಿಗಳು ಬಿಲ್ಲುಗಳನ್ನು ಮರುಪಾವತಿ ಆಧಾರದ ಮೇಲೆ ಜಾರಿಯಲ್ಲಿರುವ ಸರ್ಕಾರದ ಆದೇಶದಂತೆ ತಯಾರಿಸಬೇಕು ಮತ್ತು ಅದರಲ್ಲಿರುವ ವಿವರಗಳು ಸತ್ಯವಾಗಿರುತ್ತವೆ ಎಂದು ಪ್ರಮಾಣೀಕರಿಸಬೇಕು.

(ii) ತದನಂತರ ಪ್ರತಿಯೊಂದು ಸಹಕಾರ ಸಂಘ/ಬ್ಯಾಂಕುಗಳಿಗೆ ಸಂಬಂಧಪಟ್ಟಂತೆ ಕಾರ್ಯನಿರ್ವಹಣಾಧಿಕಾರಿಯವರು ತಯಾರಿಸಿರುವ ಬಡ್ಡಿ ಬಿಲ್ಲುಗಳನ್ನು ಸಂಘದಲ್ಲಿನ ದಾಖಲೆಗಳನ್ವಯ ಸರಿಯಾಗಿರುತ್ತವೆ ಎಂದು ಸಾಲ ನೀಡುತ್ತಿರುವ ಬ್ಯಾಂಕಿನ ಕ್ಷೇತ್ರ ಸಿಬ್ಬಂದಿ ಅಥವಾ ಬ್ಯಾಂಕಿನ ನಿರೀಕ್ಷಕರು ದೃಢೀಕರಿಸಬೇಕು.

(iii) ಆಯಾ ತಾಲ್ಲೂಕಿನಲ್ಲಿರುವ ಸಹಕಾರ ಅಭಿವೃದ್ಧಿ ಅಧಿಕಾರಿಯವರು ಅಥವಾ ಈ ಕೆಲಸಕ್ಕಾಗಿ ನಿಯೋಜಿತಗೊಂಡ ಅಧಿಕಾರಿಯವರು ಪುನಃ ಸಂಘಗಳಲ್ಲಿರುವ ದಾಖಲೆಗಳನ್ನು ಪರಿಶೀಲಿಸಿ ದೃಢೀಕರಿಸಬೇಕು.

(iv) ಸಂಘಗಳ/ಬ್ಯಾಂಕುಗಳ ಕಾರ್ಯವ್ಯಾಪ್ತಿಯಲ್ಲಿರುವ ಹಣಕಾಸು ನೀಡುವ ಶಾಖೆಯ ವ್ಯವಸ್ಥಾಪಕರು ಹಾಗೂ ಅವರೊಂದಿಗೆ ಉಪವಿಭಾಗ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಈ ಬಿಲ್ಲುಗಳನ್ನು ಪರಿಶೀಲಿಸಿ ಸರಿ ಇರುತ್ತವೆ ಎಂದು ದೃಢೀಕರಿಸಿ ಮೇಲು ರುಜು ಮಾಡಿ ಸಹಕಾರ ಸಂಘಗಳ ಜಿಲ್ಲಾ ಉಪನಿಬಂಧಕರಿಗೆ ಸಲ್ಲಿಸತಕ್ಕದ್ದು.

(v) ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿಗೆ ಮತ್ತು ವಾಣಿಜ್ಯ ಬ್ಯಾಂಕಿಗೆ ಅಧ್ಯರ್ಪಿಸಲ್ಪಟ್ಟ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಟಿಬೇಟಿಯನ್ ಸಹಕಾರ ಸಂಘಗಳು, ಲ್ಯಾಂಪ್ಸ್‌ಗಳು ಸಲ್ಲಿಸಿದ ಬಿಲ್ಲುಗಳನ್ನು ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ಸಂಬಂಧಿಸಿದ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು.

(vi) ಅದೇ ರೀತಿಯಾಗಿ ಪಿಕಾರ್ಡ್ ಬ್ಯಾಂಕಿಗೆ ಸಂಬಂಧಿಸಿದ ಬಿಲ್ಲುಗಳನ್ನು ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು ಕಸ್ಕಾರ್ಡ್ ಬ್ಯಾಂಕಿನ ಜಿಲ್ಲಾ ವ್ಯವಸ್ಥಾಪಕರಿಗೆ ಸಲ್ಲಿಸತಕ್ಕದ್ದು.

(vii) ತ್ರೈಮಾಸಿಕ ಮುಗಿದ ಒಂದು ತಿಂಗಳೊಳಗಾಗಿ ಜಿಲ್ಲೆಯಲ್ಲಿನ ಪ್ರತಿಯೊಂದು ಅರ್ಹ ಸಹಕಾರ ಸಂಘಗಳು ಬಿಲ್ಲುಗಳನ್ನು ತಯಾರಿಸಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರಿಗೆ/ಕಸ್ಕಾರ್ಡ್ ಬ್ಯಾಂಕಿನ ಜಿಲ್ಲಾ ವ್ಯವಸ್ಥಾಪಕರಿಗೆ ಸಲ್ಲಿಸುವ ಜವಾಬ್ದಾರಿಯನ್ನು ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು ವಹಿಸತಕ್ಕದ್ದು.

(viii) ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಈ ಬಿಲ್ಲುಗಳನ್ನು ಪ್ರತ್ಯೇಕವಾಗಿ ಕ್ರೋಢೀಕರಿಸಿ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು. ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಈ ಬಿಲ್ಲುಗಳನ್ನು ದೃಢೀಕರಿಸಿ ಮಂಜೂರಾತಿಗಾಗಿ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

(ix) ಕಸ್ಕಾರ್ಡ್ ಬ್ಯಾಂಕಿನ ಜಿಲ್ಲಾ ವ್ಯವಸ್ಥಾಪಕರು ಬಿಲ್ಲುಗಳನ್ನು ಕ್ರೋಢೀಕರಿಸಿ ವ್ಯವಸ್ಥಾಪಕ ನಿರ್ದೇಶಕರು, ಕಸ್ಕಾರ್ಡ್ ಬ್ಯಾಂಕ್ ಇವರಿಗೆ ಸಲ್ಲಿಸತಕ್ಕದ್ದು ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಈ ಬಿಲ್ಲುಗಳನ್ನು ದೃಢೀಕರಿಸಿ ಮಂಜೂರಾತಿಗಾಗಿ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

17. ಈ ಸಾಲಿನಲ್ಲಿ ಸಾಲ ವಿತರಿಸುವ ರೈತರ ಪೈಕಿ ಶೇಕಡಾ 25 ರಷ್ಟು ಸಾಲವನ್ನು ಹೊಸದಾಗಿ ಸಾಲ ಪಡೆಯುವ ರೈತರಿಗೆ ಕಡ್ಡಾಯವಾಗಿ ಸಾಲವನ್ನು ನೀಡತಕ್ಕದ್ದು.

18. ಒಟ್ಟಾರೆ ವಿತರಿಸಿದ ಸಾಲದ ಪೈಕಿ ಶೇಕಡಾ 24.10ರಷ್ಟು ಸಾಲವನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರಿಗೆ ಸಾಲ ನೀಡುವುದು ಕಡ್ಡಾಯವಾಗಿರುತ್ತದೆ.

19. ಈ ಯೋಜನೆಯಡಿ ಅನುದಾನದ ಬಿಡುಗಡೆಯು ಕರ್ನಾಟಕ ಆರ್ಥಿಕ ಸಂಹಿತೆಯ ಪರಿಚ್ಛೇದ 161(ಬಿ)(2), ಪರಿಚ್ಛೇದ 101(ಬಿ)(5)(111)ರಡಿಯ ಟಿಪ್ಪಣಿ–2 ಹಾಗೂ ಪರಿಚ್ಛೇದ 101(ಬಿ)(6)(11)ರ ಅವಕಾಶಗಳ ಪಾಲನೆಗೆ ಒಳಪಟ್ಟಿರುತ್ತದೆ.

20. ಸಹಕಾರ ಸಂಘಗಳ ನಿಬಂಧಕರು ಸಂಬಂಧಪಟ್ಟ ಪುನರ್ಭರಣ ಬಿಲ್ಲುಗಳು ಪರಿಶೀಲನೆ ಆದ ನಂತರ ದೃಢೀಕೃತ ಬಿಲ್ಲುಗಳ ಆಧಾರದ ಮೇಲೆ ಸಂಬಂಧಪಟ್ಟ ಸಂಸ್ಥೆಗಳಿಗೆ ಹಣವನ್ನು ಬಿಡುಗಡೆ ಮಾಡತಕ್ಕದ್ದು. ಹಾಗೂ ಹಣದ ಉಪಯೋಗದ ಬಗ್ಗೆ ತ್ರೈಮಾಸಿಕ ಪ್ರಗತಿ ವರದಿಗಳನ್ನು ಸಲ್ಲಿಸತಕ್ಕದ್ದು ಮತ್ತು ನಿಗದಿತ ನಮೂನೆಯಲ್ಲಿ ಉಪಯೋಗ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

21. ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅಗತ್ಯವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ಅಗತ್ಯವಾದ ಮಾರ್ಗದರ್ಶನ ಮತ್ತು ಸೂಚನೆಗಳನ್ನು ನೀಡಲು ಸಕ್ಷಮರಾಗಿರತಕ್ಕದ್ದು.

ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕಾಲಕಾಲಕ್ಕೆ ಸರ್ಕಾರ ಮತ್ತು ಸಹಕಾರ ಸಂಘಗಳ ನಿಬಂಧಕರು ನೀಡುವ ಸೂಚನೆಗಳನ್ನು ಸಂಬಂಧಿಸಿದ ಎಲ್ಲಾ ಸಹಕಾರ ಸಂಸ್ಥೆಗಳು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 130 ವೆಚ್ಚ–2/2016, ದಿನಾಂಕ 22–07–2016 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಧಾಕೃಷ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

**P.R.541**

**SC-100**

## ಆಹಾರ , ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರದ ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳು ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಗೆ ಮುಖ್ಯ ಜಾಗೃತ ಅಧಿಕಾರಿಯನ್ನು (Chief Vigilance Officer) ನೇಮಿಸುವ ಬಗ್ಗೆ.

**ಓದಲಾಗಿದೆ:** 2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯು 2016, ದಿನಾಂಕ: 14–03–2016.

3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 88 ಸೇಲೋಯು 2016, ದಿನಾಂಕ: 22–06–2016.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 14–03–2016ರ ಆದೇಶದನ್ವಯ ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ(2) ರಲ್ಲಿ ಓದಲಾದ ದಿನಾಂಕ: 22–06–2016ರ ಆದೇಶದಲ್ಲಿ, ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿನಾಂಕ: 14–03–2016ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ದಿನಾಂಕ: 22–06–2016ರ ಆದೇಶದಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಎಲ್ಲಾ ಇಲಾಖೆಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದೆಂದೂ ಹಾಗೂ ಆಯಾ ಇಲಾಖೆಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳ ನಂತರದ (Officer next in seniority) ಅಧಿಕಾರಿಯನ್ನು ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿರುತ್ತದೆ.

ಅದರಂತೆ, ಪರಿಶೀಲಿಸಿ, ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ.

**<u>ಸರ್ಕಾರದ ಆದೇಶ ಸಂಖ್ಯೆ: ಸಂ ಆನಾಸ 213 ಇಭತ 2016 (1), ಬೆಂಗಳೂರು, ದಿನಾಂಕ: 08–07–2016</u>**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳು ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯ ಸರ್ಕಾರದ ಅಪರ/ಸಹ/ಉಪ ಕಾರ್ಯದರ್ಶಿ ಇವರನ್ನು **"ಮುಖ್ಯ ಜಾಗೃತ ಅಧಿಕಾರಿ (Chief Vigilance Officer)"** ಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R.542**
**SC-50**

**ಸಿ.ಎಸ್. ಶಿವಕುಮಾರಸ್ವಾಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳು ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯಡಿ ಬರುವ ಇಲಾಖೆ/ನಿಗಮ/ಆಯೋಗಗಳಿಗೆ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಹಾಗೂ ಜಾಗೃತ ಅಧಿಕಾರಿ (Vigilance Officer) ಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯ 2016, ದಿನಾಂಕ: 14-03-2016.
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 88 ಸೇಲೋಯ 2016, ದಿನಾಂಕ: 22-06-2016.

**ಪ್ರಸ್ತಾವನೆ:-**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 14-03-2016ರ ಆದೇಶದನ್ವಯ ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಗಿ ಜಾರಿಗೆತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (**Anti Corruption Bureau**) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ(2) ರಲ್ಲಿ ಓದಲಾದ ದಿನಾಂಕ: 22-06-2016ರ ಆದೇಶದಲ್ಲಿ, ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿನಾಂಕ: 14-03-2016ರ ಸರ್ಕಾರಿ ಆದೇಶದಲ್ಲಿ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ದಿನಾಂಕ: 22-06-2016ರ ಆದೇಶದಲ್ಲಿ, ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳ ಕೇಂದ್ರಸ್ಥಾನದ ಕಛೇರಿಗಳಲ್ಲಿ ಒಂದು **ಜಾಗೃತ ಕೋಶ** ಇರತಕ್ಕದ್ದೆಂದೂ ಹಾಗೂ ಆಯಾ ಇಲಾಖೆ/ಸಂಸ್ಥೆಗಳ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer next in seniority) ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (**Chief Vigilance Officer)** ಯನ್ನಾಗಿ ನೇಮಿಸಲು ಹಾಗೂ ವಿಭಾಗ/ಜಿಲ್ಲಾ ಮಟ್ಟದ ಕಛೇರಿಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದ್ದು. ಈ ಜಾಗೃತ ಕೋಶಕ್ಕೆ ಜಾಗೃತ ಅಧಿಕಾರಿ (**Vigilance Officer**) ಮುಖ್ಯಸ್ಥರಾಗಿದ್ದು, ಸದರಿ ವಿಭಾಗ/ಜಿಲ್ಲಾ ಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer next in seniority) ಜಾಗೃತ ಅಧಿಕಾರಿ (**Vigilance Officer**) ಯನ್ನಾಗಿ ನೇಮಿಸಲು ಆದೇಶಿಸಲಾಗಿರುತ್ತದೆ.

ಅದರಂತೆ, ಪರಿಶೀಲಿಸಿ, ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳು ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯಡಿ ಬರುವ ಇಲಾಖೆ/ನಿಗಮ/ಆಯೋಗಕ್ಕೆ ಸಂಬಂಧಿಸಿದಂತೆ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 213 ಇಭತ 2016 (1), ಬೆಂಗಳೂರು, ದಿನಾಂಕ: 08-07-2016**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳು ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವಾಲಯದ ವ್ಯಾಪ್ತಿಯಲ್ಲಿ ಬರುವ ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ ಇಲಾಖೆ, ಕಾನೂನು ಮಾಪನಶಾಸ್ತ್ರ ಇಲಾಖೆ, ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ, ಹಾಗೂ ಕರ್ನಾಟಕ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗಕ್ಕೆ ಸಂಬಂಧಿಸಿದಂತೆ, ಕೇಂದ್ರ ಕಛೇರಿ ಹಾಗೂ ಜಿಲ್ಲಾ ಮಟ್ಟದ ಕಛೇರಿಗಳಲ್ಲಿನ ಜಾಗೃತ ಕೋಶಕ್ಕೆ **" ಮುಖ್ಯ ಜಾಗೃತ ಅಧಿಕಾರಿ"** ವಿಭಾಗ/ಜಿಲ್ಲಾ ಕಛೇರಿಗೆ "ಜಾಗೃತ ಅಧಿಕಾರಿ" ಯನ್ನು ಈ ಕೆಳಕಂಡ ಪಟ್ಟಿಯಲ್ಲಿ ತೋರಿಸಿದಂತೆ ನೇಮಿಸಿ ಆದೇಶಿಸಲಾಗಿದೆ.

| ಕ್ರ.ಸಂ. | ಇಲಾಖೆ/ನಿಗಮ/ಆಯೋಗ | ಮುಖ್ಯ ಜಾಗೃತ ಅಧಿಕಾರಿ | ಜಾಗೃತ ಅಧಿಕಾರಿ |
|---|---|---|---|
| 1 | ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ | ಜಂಟಿ ನಿರ್ದೇಶಕರು (ಸಿಎಸ್) | ಜಿಲ್ಲಾ ಮಟ್ಟದ ಕಛೇರಿಯ ಸಹಾಯಕ ನಿರ್ದೇಶಕರು |
| 2 | ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ | ಪ್ರಧಾನ ವ್ಯವಸ್ಥಾಪಕರು | ಜಿಲ್ಲಾ ಮಟ್ಟದ ಕಛೇರಿಯ ಜಿಲ್ಲಾ ಸಹಾಯಕ ವ್ಯವಸ್ಥಾಪಕರು |

| ಕ್ರ.ಸಂ. | ಇಲಾಖೆ/ನಿಗಮ/ಆಯೋಗ | ಮುಖ್ಯ ಜಾಗೃತ ಅಧಿಕಾರಿ | ಜಾಗೃತ ಅಧಿಕಾರಿ |
|---|---|---|---|
| 3 | ಕಾನೂನು ಮಾಪನಶಾಸ್ತ್ರ ಇಲಾಖೆ | ಉಪ ನಿಯಂತ್ರಕರು (ಆಡಳಿತ) | ಜಿಲ್ಲಾ ಮಟ್ಟದ ಕಛೇರಿಯ ಸಹಾಯಕ ನಿಯಂತ್ರಕರು |
| 4 | ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ | ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿ | ಜಿಲ್ಲಾ ಮಟ್ಟದ ಕಛೇರಿಯ ಸಹಾಯಕ ರಿಜಿಸ್ಟ್ರಾರ್ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎಸ್. ಶಿವಕುಮಾರಸ್ವಾಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

**P.R.543**
**SC-50**

## ENERGY SECRETARIAT

**Subject:** Reliefs and concessions to M/s Bagalkot Udyog Limited as per BIFR Order.

**Ref:**
1) BIFR Sanctioned Scheme Order, Dated: 28-05-2007.
2) Company's letter dated: 19-02-2008 reg- implementation of BIFR Sanctioned Scheme.
3) Proceedings of the meeting held under the Chairmanship of Chief Secretary, Dated: 16-04-2008.
4) Government Order No. CI 37 BIF 95, Bengaluru, Dated: 12-05-2010.
5) Proceedings of the High Level Committee meeting held under the Chairmanship of the Chief Secretary, Dated: 23-07-2012.
6) FD Lr. No. FD 2 BSG 2015, Bengaluru Dated: 30-07-2015.

### Preamble:

M/s Bagalkot Udyog Limited, (BUL) Orgininally promoted by late Dr. A.G. Tendulkar, commenced operations in 1955 with a wet process cement plant of one lakh tones per annum at Bagalkot in Karnataka. The promoters, represented by the Kanoria Group, took over the management of the Company in 1972.

2. As the net worth of the Company was eroded, a reference was made to BIFR. BIFR declared the company as sick industry during 2000. BIFR vide its Order read at (1) above, has sanctioned rehabilitation scheme.

3. The Following reliefs and concession have been extended to M/s Bagalkot Udyog Limited vide Government Order read at (4) above.

(I). To provide sales tax and concession as per the rehabilitation package contained in Government OrderNo. CI 167 SPI 2002, dated 25-09-2002.

a. To waive interest for the closure period and to recover the sales tax dues in six half yearly installments with simple interest at ½ % p.m. The past sales tax dues pertains to sales tax, Central Sales Tax, Entry Tax VAT and interest and penalty. All the past tax dues including interest and penalty as on cutoff date i.e., 01-04-2008 except the interest during the closure period, will have to be paid.

b. to defer payments of future taxes without interest for a period of 3 years.

c. There is no provision in the VAT Act for deferment of the taxes. In this case, deferment of VAT is involved in accordance with the standard package. This can be facilitated by conversion of the tax into interest free loan subject to the company paying the past taxes as per the approved package.

(II) Renewal of mining leases subject to following the prescribed procedure/ rules.

(III) One time settlement (OTS) on captive generation (₹. 23.44 lakhs) i.e., Interest to be waived if the entire principle amount is paid in one installment with one month of issue of the Government Order.

4. Further, the company has requested to defer the payment of tax on captive generation of power amounting to ₹.. 23.44 lakhs and accept the above payment in 12 half yearly installment commencing from the cutoff date without interest. The request of the company was discussed in the HLC meeting and in the proceedings read at (5) above it was resolved that as the company is already paying installements of arrears of tax on captive power generation, in accordance with the BIFR order, the Energy Department shall agree to it without insisting for interest. M/s Bagalkot Udyog Ltd., has paid tax on captive power generation in accordance with the BIFR order in 12 equal installments.

5. The matter of waiver of interest was examined by Government, since there is no provision to waive off interest under Karnataka Electricity (Taxation on Consumption) Act, 1959, the Government has sanctioned budget allocation of ₹. 20.93 Lakhs in SE-I, 2015-16 towards payment of interest to be adjusted in the books of accounts towards interest the was to be paid by M/s Bagalkot Udyog Ltd.

**GOVERNMENT ORDER NO. EN 101 EBS 2016, BENGALURU, DATED: 31-03-2016.**

In the circumstances explained in the preamble sanctioned of the Government, is accorded to adjust ₹. 20.93 Lakhs provided under HoA "2045-00-800-0-01-103- towards Waiver of Interest on Delayed payment of Electricity Tax- M/s Bagalkot Udyog Ltd., by crediting the same to HoA 0043-00-800-0-06-Other Receipts.

This is only a book adjustment and no cash out-go is involved in the transaction.

The Principle Accountant General (A&E) Karnataka, Bengaluru, is requested to carry out the necessary entries in the books of account to the above effect.

By Order and Name in the Governor of the Karnataka

**P.R. 544**
**S.C.50**

**N. SHIVAKUMAR,**
Desk Officer,
Energy Department.

## ಸಹಕಾರ ಸಚಿವಾಲಯ

**ವಿಷಯ:** ದಿ ಜನತಾ ಕೋ ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಭಟ್ಕಳ, ಉತ್ತರ ಕನ್ನಡ ಜಿಲ್ಲೆ, ಈ ಸಂಘಕ್ಕೆ 07 ಶಾಖಾ ವ್ಯವಸ್ಥಾಪಕರ ಹುದ್ದೆ ಮಂಜೂರು ಕುರಿತು.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಯುಬಿಸಿ–1/410/ಯುಸಿಎಸ್ 2015–16, ದಿನಾಂಕ: 04–06–2016.

**ಪ್ರಸ್ತಾವನೆ:–**

ಮೇಲೆ ಓದಲಾದ ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯಲ್ಲಿ ದಿ ಜನತಾ ಕೋ ಆಪರೇಟಿವ್ ಬ್ಯಾಂಕ್, ಭಟ್ಕಳ, ಇದರ ಆಡಳಿತ ಮಂಡಳಿಯು ದಿನಾಂಕ: 28–12–2015ರ ಸಭೆಯಲ್ಲಿ ಸಂಘವು ಒಟ್ಟು 13 ಶಾಖೆಗಳನ್ನು ಹೊಂದಿದ್ದು., ಹಾಲಿ ಸಂಘದಲ್ಲಿ 6 ಶಾಖಾ ವ್ಯವಸ್ಥಾಪಕರು ಕರ್ತವ್ಯ ನಿರ್ವಹಿಸುತ್ತಿದ್ದು. ಉಳಿದ ಶಾಖೆಗಳಲ್ಲಿ ಗುಮಾಸ್ತರುಗಳೇ ಶಾಖಾ ವ್ಯವಸ್ಥಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿರುವುದರಿಂದ 07 ಶಾಖಾ ವ್ಯವಸ್ಥಾಪಕರನ್ನು ನೇಮಿಸಿಕೊಳ್ಳಲು ನಿರ್ಣಯಿಸಿರುತ್ತಾರೆ.

ಸಂಘಕ್ಕೆ ಮಂಜೂರಾಗಿರುವ ಹುದ್ದೆಗಳು, ಭರ್ತಿಯಾಗಿರುವ ಹುದ್ದೆಗಳು, ಖಾಲಿ ಇರುವ ಹುದ್ದೆಗಳು, ಈಗ ಮಂಜೂರು ಮಾಡಲು ಕೋರಿರುವ ಹುದ್ದೆಗಳ ವಿವರ ಮತ್ತು ವೇತನ ಶ್ರೇಣಿ ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಮಂಜೂರು ಆಗಿರುವ ಹುದ್ದೆಗಳ ಸಂಖ್ಯೆ | ಭರ್ತಿ ಆಗಿರುವ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ | ಈಗ ಮಂಜೂರು ಮಾಡಲು ಕೋರಿರುವ ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ (₹. ಗಳಲ್ಲಿ) |
|---|---|---|---|---|---|---|
| **01** | **02** | **03** | **04** | **05** | **06** | **07** |
| 01 | ಪ್ರಧಾನ ವ್ಯವಸ್ಥಾಪಕರು | 01 | 01 | 0 | 0 | 18100–26925 |
| 02 | ವ್ಯವಸ್ಥಾಪಕರು | 01 | 01 | 0 | 0 | 11400–21600 |
| 03 | ಲೆಕ್ಕಿಗರು | 01 | 01 | 0 | 0 | 10000–18150 |
| 04 | ಶಾಖಾ ವ್ಯವಸ್ಥಾಪಕರು | 06 | 06 | 0 | 07 | 10000–18150 |
| 05 | ಕಿರಿಯ ಗುಮಾಸ್ತರು | 35 | 35 | 0 | 0 | 7725–13350 |
| 06 | ಸಿಪಾಯಿ | 10 | 10 | 0 | 0 | 5200–8200 |
| 07 | ಭದ್ರತಾ ಸಿಬ್ಬಂದಿ | 01 | 01 | 0 | 0 | 5200–8200 |
| | **ಒಟ್ಟು** | **55** | **55** | **0** | **07** | |

ಸಂಘದ ಆರ್ಥಿಕ ಪ್ರಗತಿಯನ್ನು ಪರಿಶೀಲಿಸಲಾಗಿ, ಸಂಘವು 2012–13 ರಿಂದ 2015–16ನೇ ಸಾಲಿನಲ್ಲಿ ಸತತವಾಗಿ ಲಾಭ ಗಳಿಸಿರುತ್ತದೆ. 2014–15ರಲ್ಲಿ ಸಿಬ್ಬಂದಿವೆಚ್ಚ ₹ 168.00 ಲಕ್ಷ ಇದ್ದು ದುಡಿಯುವ ಬಂಡವಾಳಕ್ಕೆ ಶೇ. 2.57 ರಷ್ಟಿರುತ್ತದೆ. ಈಗ ಪ್ರಸ್ತಾಪಿತ 07 ಶಾಖಾ ವ್ಯವಸ್ಥಾಪಕರ ಹುದ್ದೆಗಳನ್ನು ಮಂಜೂರು ಮಾಡಿದಲ್ಲಿ ಸಿಬ್ಬಂದಿ ವೆಚ್ಚ ₹ 24.97 ಲಕ್ಷ ಹೆಚ್ಚುವರಿಯಾಗಿ ಒಟ್ಟಾರೆ ವೆಚ್ಚವು ₹ 193.00 ಲಕ್ಷಗಳಾಗಲಿದ್ದು, ಅದು ದುಡಿಯುವ ಬಂಡವಾಳಕ್ಕೆ ಶೇ. 2.29 ರಷ್ಟಾಗುತ್ತದೆ. ಈ ಹಿನ್ನೆಲೆಯಲ್ಲಿ ಬ್ಯಾಂಕಿನ ಕೋರಿಕೆಯಂತೆ ನಿಬಂಧಕರ ಪ್ರಸ್ತಾವನೆಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 100 ಸಂಮಾಸ 2016, ಬೆಂಗಳೂರು, ದಿನಾಂಕ: 02–08–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ **ದಿ ಜನತಾ ಕೋ ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಭಟ್ಕಳ, ಉತ್ತರ ಕನ್ನಡ ಜಿಲ್ಲೆ ಈ ಸಂಘಕ್ಕೆ 07 ಶಾಖಾ ವ್ಯವಸ್ಥಾಪಕರ ಹುದ್ದೆಗಳನ್ನು ವೇತನ ಶ್ರೇಣಿ ₹ 10000–18150** ರಲ್ಲಿ ನೇಮಕ ಮಾಡಿಕೊಳ್ಳಲು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ, 17 ರನ್ವಯ ನೇಮಕಾತಿಗೆ ಅನುಮೋದನೆ ನೀಡಿ ಆದೇಶಿಸಲಾಗಿದೆ.

**ಷರತ್ತುಗಳು:**

1. ನೇಮಕಾತಿಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಿಒ 166 ಸಿಎಲ್ಎಂ 2012, ದಿನಾಂಕ: 22–08–2013 ರಲ್ಲಿ ವಿಧಿಸಿರುವ ಷರತ್ತುಗಳನ್ನು ಕಡ್ಡಾಯವಾಗಿ ಪಾಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟಸ್ವಾಮಿ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**P.R.545**
**SC-50**

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕೈಗಾರಿಕಾ ನೀತಿ 2014–19ನ್ನು ಅನುಷ್ಠಾನಗೊಳಿಸಲು ಉನ್ನತ ಮಟ್ಟದ ಇಲಾಖಾ ಮೇಲ್ವಿಚಾರಣಾ ಸಮಿತಿ (High Level Departmental Monitoring Committee) ಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಐ 58 ಎಸ್‌ಪಿಐ 2013, ದಿನಾಂಕ: 01.10.2014.
2. ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪತ್ರ ಸಂಖ್ಯೆ: ಕೈವಾಇ/ಕೈಅ/ಇ5/ಕ.ಸ.515/ಕೈನೀ–2014–19/2014–15, ದಿನಾಂಕ: 23–06–2016.

**ಪ್ರಸ್ತಾವನೆ:**

ರಾಜ್ಯ ಸರ್ಕಾರವು, ರಾಜ್ಯದಲ್ಲಿ ಉತ್ಪಾದನೆ ಮತ್ತು ಆಯ್ದ ಸೇವಾ ಕೈಗಾರಿಕೆಗಳನ್ನು ಉತ್ತೇಜಿಸುವ ಸಲುವಾಗಿ ದಿನಾಂಕ: 01.10.2014ರ ಸರ್ಕಾರಿ ಆದೇಶ ಸಂಖ್ಯೆ: ಸಿಐ 58 ಎಸ್‌ಪಿಐ 2013 ರೀತ್ಯಾ ಕರ್ನಾಟಕ ಕೈಗಾರಿಕಾ ನೀತಿ 2014–19ನ್ನು ಪ್ರಕಟಿಸಿ ಜಾರಿಗೊಳಿಸಿದೆ. ಈ ಕೈಗಾರಿಕಾ ನೀತಿಯ ಕಂಡಿಕೆ (6)ರಂತೆ ಕೈಗಾರಿಕಾ ನೀತಿಯ ಎಲ್ಲಾ ಅಂಶಗಳ ಅನುಷ್ಠಾನದ ಪ್ರಗತಿ ಮೇಲೆ ನಿಯಮಿತವಾಗಿ ಗಮನ ಹರಿಸಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಹಾಗೂ ಸಂಬಂಧಪಟ್ಟ ವಿವಿಧ ಇಲಾಖೆಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ / ಸರ್ಕಾರದ ಪ್ರಧಾನ ಕಾರ್ಯದರ್ಶಿ / ಸರ್ಕಾರದ ಕಾರ್ಯದರ್ಶಿಗಳ ಸಹಯೋಗದೊಂದಿಗೆ ಉನ್ನತ ಮಟ್ಟದ ಇಲಾಖಾ ಮೇಲ್ವಿಚಾರಣಾ ಸಮಿತಿ (High Level Departmental Monitoring Committee) ರಚಿಸಲು ಅವಕಾಶ ಕಲ್ಪಿಸಿದೆ.

ಈ ಸಂಬಂಧ ಕೆಳಕಂಡ ಅಧಿಕಾರಿಗಳನ್ನು ಸದರಿ ಸಮಿತಿಗೆ ಅಧ್ಯಕ್ಷರು / ಸದಸ್ಯರನ್ನಾಗಿ ನೇಮಿಸಿ ಸರ್ಕಾರದ ಆದೇಶ ಹೊರಡಿಸಬೇಕೆಂದು ಕೋರಿ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಮೇಲೆ ಓದಲಾದ (2)ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ.ಸಂ. | ಉನ್ನತ ಮಟ್ಟದ ಮೇಲ್ವಿಚಾರಣಾ ಸಮಿತಿ | | |
|---|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ / ಸರ್ಕಾರದ ಪ್ರಧಾನ ಕಾರ್ಯದರ್ಶಿ / ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | : | ಅಧ್ಯಕ್ಷರು |
| 2. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ / ಸರ್ಕಾರದ ಪ್ರಧಾನ ಕಾರ್ಯದರ್ಶಿ / ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ | : | ಸದಸ್ಯರು |
| 3. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ / ಸರ್ಕಾರದ ಪ್ರಧಾನ ಕಾರ್ಯದರ್ಶಿ / ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ | : | ಸದಸ್ಯರು |
| 4. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ / ಸರ್ಕಾರದ ಪ್ರಧಾನ ಕಾರ್ಯದರ್ಶಿ / ಸರ್ಕಾರದ ಕಾರ್ಯದರ್ಶಿ, ಇಂಧನ ಇಲಾಖೆ | : | ಸದಸ್ಯರು |
| 5. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ / ಸರ್ಕಾರದ ಪ್ರಧಾನ ಕಾರ್ಯದರ್ಶಿ / ಸರ್ಕಾರದ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ | : | ಸದಸ್ಯರು |
| 6. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ / ಸರ್ಕಾರದ ಪ್ರಧಾನ ಕಾರ್ಯದರ್ಶಿ / ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ | : | ಸದಸ್ಯರು |
| 7. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ / ಸರ್ಕಾರದ ಪ್ರಧಾನ ಕಾರ್ಯದರ್ಶಿ / ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ | : | ಸದಸ್ಯರು |
| 8. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ | : | ಸದಸ್ಯರು |
| 9. | ಆಯುಕ್ತರು, ವಾಣಿಜ್ಯ ತೆರಿಗೆಗಳ ಇಲಾಖೆ | : | ಸದಸ್ಯರು |
| 10. | ವ್ಯವಸ್ಥಾಪಕ ನಿರ್ದೇಶಕರು, ಕೆ.ಎಸ್.ಐ.ಐ.ಡಿ.ಸಿ. | : | ಸದಸ್ಯರು |

| ಕ್ರ.ಸಂ. | ಉನ್ನತ ಮಟ್ಟದ ಮೇಲ್ವಿಚಾರಣಾ ಸಮಿತಿ | | |
|---|---|---|---|
| 11. | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಹಾಗೂ ಕಾರ್ಯನಿರ್ವಾಹಕ ಸದಸ್ಯರು, ಕೆ.ಐ.ಎ.ಡಿ.ಬಿ. | : | ಸದಸ್ಯರು |
| 12. | ವ್ಯವಸ್ಥಾಪಕ ನಿರ್ದೇಶಕರು, ಕೆ.ಎಸ್.ಎಸ್.ಐ.ಡಿ.ಸಿ. | : | ಸದಸ್ಯರು |
| 13. | ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ | : | ಸದಸ್ಯ ಕಾರ್ಯದರ್ಶಿ |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 58 ಎಸ್‌ಪಿಐ 2013, ಬೆಂಗಳೂರು, ದಿನಾಂಕ: 20.07.2016.**

ಕರ್ನಾಟಕ ಕೈಗಾರಿಕಾ ನೀತಿ 2014–19ರ ಎಲ್ಲಾ ಅಂಶಗಳ ಅನುಷ್ಠಾನದ ಪ್ರಗತಿ ಮೇಲೆ ನಿಯಮಿತವಾಗಿ ಗಮನ ಹರಿಸಲು ಈ ಕೆಳಕಂಡಂತೆ ಉನ್ನತ ಮಟ್ಟದ ಇಲಾಖಾ ಮೇಲ್ವಿಚಾರಣಾ ಸಮಿತಿ (High Level Departmental Monitoring Committee) ರಚಿಸಿ ಆದೇಶಿಸಲಾಗಿದೆ.

| ಕ್ರ.ಸಂ. | ಉನ್ನತ ಮಟ್ಟದ ಮೇಲ್ವಿಚಾರಣಾ ಸಮಿತಿ | | |
|---|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | : | ಅಧ್ಯಕ್ಷರು |
| 2. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ | : | ಸದಸ್ಯರು |
| 3. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ | : | ಸದಸ್ಯರು |
| 4. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಕಾರ್ಮಿಕ ಇಲಾಖೆ | : | ಸದಸ್ಯರು |
| 5. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆರ್ಥಿಕ ಇಲಾಖೆ | : | ಸದಸ್ಯರು |
| 6. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ | : | ಸದಸ್ಯರು |
| 7. | ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ | : | ಸದಸ್ಯರು |
| 8. | ಆಯುಕ್ತರು, ವಾಣಿಜ್ಯ ತೆರಿಗೆಗಳ ಇಲಾಖೆ | : | ಸದಸ್ಯರು |
| 9. | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಹಾಗೂ ಕಾರ್ಯನಿರ್ವಾಹಕ ಸದಸ್ಯರು, ಕೆ.ಐ.ಎ.ಡಿ.ಬಿ. | : | ಸದಸ್ಯರು |
| 10. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ | : | ಸದಸ್ಯರು |
| 11. | ವ್ಯವಸ್ಥಾಪಕ ನಿರ್ದೇಶಕರು, ಕೆ.ಎಸ್.ಐ.ಐ.ಡಿ.ಸಿ. | : | ಸದಸ್ಯರು |
| 12. | ವ್ಯವಸ್ಥಾಪಕ ನಿರ್ದೇಶಕರು, ಕೆ.ಎಸ್.ಎಸ್.ಐ.ಡಿ.ಸಿ. | : | ಸದಸ್ಯರು |
| 13. | ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ | : | ಸದಸ್ಯ ಕಾರ್ಯದರ್ಶಿ |

ಸದರಿ ಸಮಿತಿಯ ಕಾರ್ಯ ಚಟುವಟಿಕೆ / Terms & Reference ಈ ಕೆಳಕಂಡಂತೆ ಇರುತ್ತದೆ.

a) ಸಮಿತಿಯ, ನೀತಿಗೆ ಸಂಬಂಧಪಟ್ಟಂತೆ ವಿವಿಧ ಇಲಾಖೆಗಳು ಸರ್ಕಾರಿ ಅಧಿಸೂಚನೆಗಳನ್ನು ಕಾಲಕಾಲಕ್ಕೆ ಸರಿಯಾಗಿ ಜಾರಿಗೊಳಿಸುವುದನ್ನು ಖಚಿತಪಡಿಸುವುದು.

b) ಸಮಿತಿಯ, ನೀತಿಯ ಸುಸೂತ್ರ ಅನುಷ್ಠಾನಕ್ಕಾಗಿ ಅಗತ್ಯವಾದೆಡೆ ನೀತಿಯ ಅನುಷ್ಠಾನದ ಅವಧಿಯಲ್ಲಿ ತಿದ್ದುಪಡಿ ತರುವುದನ್ನು ಶಿಫಾರಸ್ಸು ಮಾಡುವುದು.

c) ಸಮಿತಿಯು, ನೀತಿಯ ಅನುಷ್ಠಾನದಲ್ಲಿ ಸಾಧಿಸಲಾಗುವ ಪ್ರಗತಿ ಕುರಿತಂತೆ ಅರ್ಧವಾರ್ಷಿಕ ವರದಿಗಳನ್ನು ಸಹ ಹೊರತರುವುದು.

d) ಇದಲ್ಲದೇ, ಸಮಿತಿಗೆ ಇಲಾಖೆಯ ಪಾಲಿಸಿ ಮಾನಿಟರಿಂಗ್ ಕೋಶ ಅಥವಾ ಔಟ್‌ಸೋರ್ಸ್ ಮಾಡಲಾದ ವೃತ್ತಿಪರ ಸಂಸ್ಥೆ ಅಥವಾ ಪ್ರಸ್ತುತ ರಚನೆಯಾಗುತ್ತಿರುವ Invest Karnataka Forum ಗೆ ನೆರವನ್ನು ನೀಡುವುದು.

**P.R. 532**
**S.C – 50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಉಮಾದೇವಿ**

ಪೀಠಾಧಿಕಾರಿ (ತಾಂತ್ರಿಕ ಕೋಶ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಬ್ಯಾಲದಹಳ್ಳಿ ಗ್ರಾಮದ ಸ.ನಂ. 23ರಲ್ಲಿ 4–08 ಎಕರೆ ಜಮೀನನ್ನು ಕಾಗಿನೆಲೆ ಮಹಾಸಂಸ್ಥಾನ ಶ್ರೀ ಕನಕಗುರು ಪೀಠಕ್ಕೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿ/ಸಿಆರ್/314/2012–13, ದಿನಾಂಕ: 07–03–2013 ಮತ್ತು ದಿನಾಂಕ: 15–04–2016.

**ಪ್ರಸ್ತಾವನೆ:**

ಮೇಲೆ ಓದಲಾದ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ದಿನಾಂಕ: 07-03-2013ರ ಪ್ರಸ್ತಾವನೆಯಲ್ಲಿ ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಬ್ಯಾಲದಹಳ್ಳಿ ಗ್ರಾಮದ, ಸ.ನಂ. 23ರಲ್ಲಿ 4-08 ಎಕರೆ ಜಮೀನನ್ನು ಕಾಗಿನೆಲೆ ಮಹಾಸಂಸ್ಥಾನ ಶ್ರೀ ಕನಕಗುರು ಪೀಠಕ್ಕೆ ಮಂಜೂರು ಮಾಡುವ ಬಗ್ಗೆ ಪ್ರಸ್ತಾಪಿಸಿರುತ್ತಾರೆ.

ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಬ್ಯಾಲದಹಳ್ಳಿ ಗ್ರಾಮದ ಸ.ನಂ. 23ರಲ್ಲಿ 4-08 ಎಕರೆ ಜಮೀನಿದ್ದು, ಪಹಣಿ ಪತ್ರಿಕೆಯ ಕಾಲಂ 9ರಲ್ಲಿ "ಸರ್ಕಾರ" ಎಂದು ನಮೂದಾಗಿರುತ್ತದೆ. ಪ್ರಸ್ತಾಪಿತ ಜಮೀನು ಮೂಲತ: ಬೀರದೇವರ ಗುಡಿ ಇರುವ ಖರಾಬು ಜಮೀನಾಗಿದ್ದು, ಜಿಲ್ಲಾಧಿಕಾರಿಗಳ ದಿನಾಂಕ: 22.12.1984ರ ಆದೇಶದಂತೆ ಬೀರದೇವರ ದೇವಸ್ಥಾನಕ್ಕೆ ನೀಡಲಾಗಿರುತ್ತದೆ. ಸದರಿ ಜಮೀನಿನಲ್ಲಿ ಹೊಂಡವನ್ನು ತೋಡಿಸಿ ಸಾರ್ವಜನಿಕರಿಗೆ ಕುಡಿಯುವ ನೀರಿನ ವ್ಯವಸ್ಥೆಯನ್ನು ಸರ್ಕಾರವೇ ಮಾಡಿದ್ದು, ಕರ್ನಾಟಕ ಭೂ ಸುಧಾರಣೆ ಕಾಯ್ದೆ ಜಾರಿಗೆ ಬಂದ ನಂತರ ಕಲಂ 79(ಬಿ)ರಡಿ ಇನಾಂ ಅಬಾಲಿಷನ್ ಆಕ್ಟ್ ಪ್ರಕಾರ ದಿನಾಂಕ: 23.04.1999ರಂದು ಪ್ರಸ್ತಾಪಿತ ಜಮೀನನ್ನು ಸರ್ಕಾರಕ್ಕೆ ನಿಹಿತಗೊಳಿಸಿ ಪಹಣಿ ಪತ್ರಿಕೆಯ ಕಾಲಂ 9ರಲ್ಲಿ "ಸರ್ಕಾರ" ಎಂದು ನಮೂದಿಸಲಾಗಿದೆ. ಆದರೆ ಪ್ರಸ್ತಾಪಿತ ಜಮೀನು ದೇವಸ್ಥಾನದ ಕಮಿಟಿಯವರ ಸ್ವಾಧೀನಾನುಭವದಲ್ಲಿರುತ್ತದೆ.

ಶ್ರೀ ಕಾಗಿನೆಲೆ ಪೀಠಾಧ್ಯಕ್ಷರಾದ ಶ್ರೀ ನಿರಂಜನಾನಂದಪುರಿ ಮಹಾಸ್ವಾಮಿಗಳು ದಿನಾಂಕ: 23.07.2012ರಂದು ಅಂದಿನ ಉಪ ಮುಖ್ಯಮಂತ್ರಿಗಳಿಗೆ ಮನವಿಯನ್ನು ಸಲ್ಲಿಸಿ, ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಬ್ಯಾಲದಹಳ್ಳಿ ಗ್ರಾಮದ ಸ.ನಂ. 23ರಲ್ಲಿ 4-08 ಎಕರೆ ಜಮೀನು ಹಾಲಿ ಶ್ರೀ ಬೀರದೇವರ ದೇವಸ್ಥಾನದ ಕಮಿಟಿಯ ಸ್ವಾಧೀನಾನುಭವದಲ್ಲಿದ್ದು, ಸದರಿ ಜಮೀನಿನಿಂದ ಬರುವ ಆದಾಯವನ್ನು ದೇವಸ್ಥಾನಕ್ಕೆ ಬಳಸುತ್ತಿರುವುದರಿಂದ ಪ್ರಸ್ತಾಪಿತ ಜಮೀನನ್ನು ದೇವಸ್ಥಾನದ ಜೀರ್ಣೋದ್ಧಾರ ಹಾಗೂ ಸಾರ್ವಜನಿಕ ಉಪಯುಕ್ತ ಕಾಮಗಾರಿ ಕೈಗೊಳ್ಳಲು ತಮ್ಮ ಸಂಸ್ಥೆಗೆ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 77 ಎಲ್‌ಜಿಸಿ 2013, ಬೆಂಗಳೂರು, ದಿನಾಂಕ: 13.07.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಬ್ಯಾಲದಹಳ್ಳಿ ಗ್ರಾಮದ ಸ.ನಂ. 23ರಲ್ಲಿ 4-08 ಎಕರೆ ಜಮೀನನ್ನು ಶ್ರೀ ಬೀರದೇವರ ದೇವಸ್ಥಾನದ ಜೀರ್ಣೋದ್ಧಾರ ಹಾಗೂ ಸಾರ್ವಜನಿಕ ಉಪಯುಕ್ತ ಕಾಮಗಾರಿ ಕೈಗೊಳ್ಳಲು ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 22-ಎ(1)(4) ಅನ್ವಯ ಪ್ರಚಲಿತ ಮಾರ್ಗಸೂಚಿ ಬೆಲೆಯ ಶೇ. 50ರಷ್ಟು ದರ ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಕಾಗಿನೆಲೆ ಮಹಾಸಂಸ್ಥಾನ ಶ್ರೀ ಕನಕಗುರು ಪೀಠಕ್ಕೆ ಈ ಕೆಳಕಂಡ ಷರತ್ತುಗಳೊಂದಿಗೆ, ಮಂಜೂರು ಮಾಡಿ ಆದೇಶಿಸಿದೆ.

1) ಜಮೀನು ಹಸ್ತಾಂತರ ಪ್ರಕ್ರಿಯೆಯನ್ನು ಜಿಲ್ಲಾಧಿಕಾರಿ, ದಾವಣಗೆರೆ ಜಿಲ್ಲೆ ಇವರು ನಿಯಮಾನುಸಾರ ನಿರ್ವಹಿಸಲು ನಿರ್ದೇಶಿಸಿದೆ.
2) ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
3) ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
4) ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲಿ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು. ಹಾಗೂ ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
5) ಮಂಜೂರಾದ ಜಮೀನಿನಲ್ಲಿ, ಅಭಿವೃದ್ಧಿ ಕಾರ್ಯಗಳನ್ನು ಆರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರಾವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
6) ಮಂಜೂರಾದ ಜಮೀನು, 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ, ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೆ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

**P.R. 533**

**S.C – 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರೇವಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ – 3)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಕರ್ನಾಟಕ ವೈದ್ಯಕೀಯ ಕೋರ್ಸ್‌ಗಳನ್ನು ಪೂರ್ಣಗೊಳಿಸಿದ ಕಡ್ಡಾಯ ಸೇವಾ ತರಬೇತಿಯ ಸ್ನಾತಕೋತ್ತರ/ಡಿಪ್ಲೊಮಾ ಪದವೀಧರರಿಗೆ ಹಾಗೂ ಸೂಪರ್ ಸ್ಪೆಷಾಲಿಟಿ ಪದವೀಧರರಿಗೆ ಮಾಸಿಕ ವೇತನ ಹೆಚ್ಚಳದ ಬಗ್ಗೆ.

**ಓದಲಾಗಿದೆ :**

1) ಸರ್ಕಾರಿ ಆದೇಶ ಸಂಖ್ಯೆ: ಆಕುಕ 143 ಹೆಚ್ಎಸ್‌ಹೆಚ್ 2012, ದಿನಾಂಕ: 16–04–2012.
2) ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 57 ಶಾಸನ 2012, ದಿನಾಂಕ: 06–08–2015.
3) ಕರ್ನಾಟಕ ಉಚ್ಚ ನ್ಯಾಯಾಲಯದ ಮಧ್ಯಂತರ ಆದೇಶ ದಿನಾಂಕ: 06–10–2015.
4) ಕರ್ನಾಟಕ ಉಚ್ಚ ನ್ಯಾಯಾಲಯದ ಮಧ್ಯಂತರ ಆದೇಶ ದಿನಾಂಕ: 28–04–2016.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ. (1)ರಲ್ಲಿ, ಸರ್ಕಾರಿ ಕೋಟಾದಲ್ಲಿ ಆಯ್ಕೆಗೊಂಡು ವೈದ್ಯಕೀಯ ವ್ಯಾಸಂಗವನ್ನು ಪೂರ್ಣಗೊಳಿಸಿದ ಎಂಬಿಬಿಎಸ್, ಸ್ನಾತಕೋತ್ತರ ಪದವಿ ಮತ್ತು ಸ್ನಾತಕೋತ್ತರ ಡಿಪ್ಲೊಮಾ ಪಡೆದ ಅಭ್ಯರ್ಥಿಗಳ ಸೇವೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆಸ್ಪತ್ರೆ/ಕೇಂದ್ರಗಳಲ್ಲಿ ಬಳಸಿಕೊಳ್ಳಲು ಉದ್ದೇಶಿಸಿ, ಅಂತಹ ಅಭ್ಯರ್ಥಿಗಳಲ್ಲಿ ಎಂಬಿಬಿಎಸ್ ವೈದ್ಯರಿಗೆ ₹. 25,000/– ಹಾಗೂ ಸ್ನಾತಕೋತ್ತರ ಪದವಿ ಪಡೆದ ಅಭ್ಯರ್ಥಿಗಳಿಗೆ ₹. 35,000/– ಮತ್ತು ಸ್ನಾತಕೋತ್ತರ ಡಿಪ್ಲೊಮಾ ಪಡೆದ ಅಭ್ಯರ್ಥಿಗಳಿಗೆ ₹. 32,500/– ಗಳ ಮಾಸಿಕ ಸಂಚಿತ ಸಂಭಾವನೆಯನ್ನು ನಿಗಧಿಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ. (2)ರಲ್ಲಿ 'ಕರ್ನಾಟಕ ವೈದ್ಯಕೀಯ ಕೋರ್ಸ್‌ಗಳನ್ನು ಪೂರ್ಣಗೊಳಿಸಿದ ಅಭ್ಯರ್ಥಿಗಳ ಕಡ್ಡಾಯ ಸೇವಾ ತರಬೇತಿ ಅಧಿನಿಯಮ, 2012 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ: 26)ಅನ್ನು ಜಾರಿಗೆ ತರಲಾಗಿದೆ. ಸದರಿ ಅಧಿನಿಯಮದನ್ವಯ, ಎಂಬಿಬಿಎಸ್ ಪೂರ್ಣಗೊಳಿಸಿದ ಅಭ್ಯರ್ಥಿಗಳನ್ನು 1 ವರ್ಷ ಕಡ್ಡಾಯ ಗ್ರಾಮೀಣ ಸೇವೆಗೆ ನೇಮಕ ಮಾಡಿದಲ್ಲಿ ಅವರಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುವ ಒಬ್ಬ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯ ಒಟ್ಟು ವೇತನದಲ್ಲಿ ₹. 100/– ಗಳನ್ನು ಕಟಾಯಿಸಿ ವೇತನ ಪಾವತಿಸಬೇಕಾಗುತ್ತದೆ. ಸ್ನಾತಕೋತ್ತರ ಪದವಿ/ಡಿಪ್ಲೋಮಾ ಪೂರ್ಣಗೊಳಿಸಿದ ಅಭ್ಯರ್ಥಿಯನ್ನು ಕಡ್ಡಾಯ ಗ್ರಾಮೀಣ ಸೇವೆಗೆ ಒಳಪಡಿಸಿದಲ್ಲಿ ಅವರಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ತಜ್ಞ ವೈದ್ಯರಿಗೆ ಪಾವತಿಸುವ ಒಟ್ಟು ವೇತನದಲ್ಲಿ ₹. 100/–ಗಳನ್ನು ಕಟಾಯಿಸಿ ವೇತನ ಪಾವತಿಸಬೇಕಾಗುತ್ತದೆ ಹಾಗೂ ಸೂಪರ್ ಸ್ಪೆಷಾಲಿಟಿ ಪದವಿ ಪಡೆದ ಅಭ್ಯರ್ಥಿಗಳನ್ನು ಕಡ್ಡಾಯ ಗ್ರಾಮೀಣ ಸೇವೆಗೆ ಒಳಪಡಿಸಿದಲ್ಲಿ ಅವರಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಹಿರಿಯ ತಜ್ಞ ವೈದ್ಯರಿಗೆ ಪಾವತಿಸುವ ಒಟ್ಟು ವೇತನದಲ್ಲಿ ₹. 100/– ಗಳನ್ನು ಕಡಿತಗೊಳಿಸಿ ವೇತನ ಪಾವತಿಸಬೇಕಾಗುತ್ತದೆ.

'ಕರ್ನಾಟಕ ವೈದ್ಯಕೀಯ ಕೋರ್ಸ್‌ಗಳನ್ನು ಪೂರ್ಣಗೊಳಿಸಿದ ಅಭ್ಯರ್ಥಿಗಳ ಕಡ್ಡಾಯ ಸೇವಾ ತರಬೇತಿ ಅಧಿನಿಯಮ, 2012' (2015ರ ಕರ್ನಾಟಕ ಅಧಿನಿಯಮ ಸಂಖ್ಯೆ. 26ರ ವಿರುದ್ಧ ಕೆಲವು ಅಭ್ಯರ್ಥಿಗಳು ಮಾನ್ಯ ನ್ಯಾಯಾಲಯದಲ್ಲಿ ದಾವೆ ಹೂಡಿದ ಕಾರಣ, ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ಮೇಲೆ ಓದಲಾದ ಕ್ರಮ ಸಂಖ್ಯೆ. (3)ರಲ್ಲಿನ ತನ್ನ ಮಧ್ಯಂತರ ಆದೇಶದಲ್ಲಿ ಸದರಿ ಅಧಿನಿಯಮಕ್ಕೆ ತಡೆಯಾಜ್ಞೆ ನೀಡಿರುತ್ತದೆ.

ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ಮೇಲೆ ಓದಲಾದ ಕ್ರಮ ಸಂಖ್ಯೆ. (4)ರಲ್ಲಿ 'ಕರ್ನಾಟಕ ವೈದ್ಯಕೀಯ ಕೋರ್ಸ್‌ಗಳನ್ನು ಪೂರ್ಣಗೊಳಿಸಿದ ಅಭ್ಯರ್ಥಿಗಳ ಕಡ್ಡಾಯ ಸೇವಾ ತರಬೇತಿ ಅಧಿನಿಯಮ, 2012'ರನ್ವಯ ಸ್ವ–ಇಚ್ಛೆಯಿಂದ ಕರ್ತವ್ಯ ನಿರ್ವಹಿಸಲು ಬರುವ ಅಭ್ಯರ್ಥಿಗಳನ್ನು ಕಡ್ಡಾಯ ಗ್ರಾಮೀಣ ಸೇವೆಗೆ ಒಳಪಡಿಸಿ, ಅವರಿಗೆ ಸದರಿ ಅಧಿನಿಯಮದನ್ವಯ ವೇತನ ಮತ್ತು ಇತರೆ ಭತ್ಯೆಗಳನ್ನು ಪಾವತಿಸಲು ಅವಕಾಶ ಕಲ್ಪಿಸಿರುತ್ತದೆ.

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸ್ನಾತಕೋತ್ತರ/ಡಿಪ್ಲೊಮೊ ಪದವೀಧರರಿಗೆ ಹಾಗೂ ಸೂಪರ್ ಸ್ಪೆಷಾಲಿಟಿ ಪದವೀಧರರಿಗೆ ಪ್ರಸ್ತುತ ನೀಡುತ್ತಿರುವ ವೇತನ ಸ್ನಾತಕೋತ್ತರ / ಡಿಪ್ಲೊಮೊ ಹಾಗೂ ಸೂಪರ್ ಸ್ಪೆಷಾಲಿಟಿ ವಿದ್ಯಾರ್ಥಿಗಳಿಗೆ ನೀಡುತ್ತಿರುವ ಮಾಸಿಕ ಶಿಷ್ಯ ವೇತನಕ್ಕಿಂತ ಕಡಿಮೆಯಿರುವುದನ್ನು ಮನಗಂಡ ಸರ್ಕಾರ ಅವರ ವೇತನವನ್ನು ಹೆಚ್ಚಿಸಲು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 544 ಎಚ್ಎಸ್‌ಎಚ್ 2012, ಬೆಂಗಳೂರು, ದಿನಾಂಕ: 19.07.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆಸ್ಪತ್ರೆ/ಕೇಂದ್ರಗಳಲ್ಲಿ ಕಡ್ಡಾಯ ಸೇವೆಗೆ ನೇಮಕವಾಗುವ ಸ್ನಾತಕೋತ್ತರ / ಡಿಪ್ಲೊಮಾ ಪದವೀಧರರಿಗೆ ಹಾಗೂ ಸೂಪರ್ ಸ್ಪೆಷಾಲಿಟಿ ಪದವೀಧರರಿಗೆ ಕ್ರಮವಾಗಿ ₹. 45,000/– (ನಲವತ್ತೈದು ಸಾವಿರ ರೂಪಾಯಿಗಳು ಮಾತ್ರ) ಮತ್ತು ₹. 55,000/– (ಐವತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳ ಮಾಸಿಕ ಸಂಭಾವನೆಯನ್ನು ನಿಗಧಿಪಡಿಸಿದೆ.

**ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 506 ವೆಚ್ಚ–5/2016, ದಿನಾಂಕ: 28.06.2016ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.**

P.R. 535

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ನರಸಿಂಹರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ವ್ಯಾಸರಾಜ ಮಠದ (ಸೋಸಲೆ) ಆಡಳಿತಾಧಿಕಾರಿಯ ಅವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ: ಕಂಇ 67 ಮುದಾಪ್ರ 2002, ದಿನಾಂಕ: 26–05–2012.
2) ಸರ್ಕಾರದ ಆದೇಶ ಸಂಖ್ಯೆ: ಕಂಇ 34 ಮುಸೇವಿ 2014, ದಿನಾಂಕ: 24–05–2014.
3) ಸರ್ಕಾರದ ಆದೇಶ ಸಂಖ್ಯೆ: ಕಂಇ 34 ಮುಸೇವಿ 2014, ದಿನಾಂಕ: 21–05–2015.
4) ಆಡಳಿತಾಧಿಕಾರಿ, ಶ್ರೀ ವ್ಯಾಸರಾಜ ಮಠ (ಸೋಸಲೆ) ಇವರ ಪತ್ರ ಸಂಖ್ಯೆ: ಎಡಿಎಂ/22/ ಶ್ರೀವ್ಯಾಸೋಮ/2012(ಭಾ), ದಿನಾಂಕ: 05.04.2016.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ. (1)ರ ಸರ್ಕಾರದ ಆದೇಶದಲ್ಲಿ, ಶ್ರೀ ವ್ಯಾಸರಾಜ (ಸೋಸಲೆ) ಮಠದ ಸಮಸ್ತ ಆಸ್ತಿಗಳನ್ನು ಹಾಗೂ ದೇಶದ ವಿವಿಧ ಭಾಗಗಳಲ್ಲಿರುವ ಶ್ರೀ ಮಠದ ಶಾಖೆಗಳ ಆಡಳಿತವನ್ನು ಸರ್ಕಾರದ ವಶಕ್ಕೆ ತೆಗೆದುಕೊಂಡು ಆಡಳಿತ ನಿರ್ವಹಣೆ ನಡೆಸಲು, ಆಡಳಿತಾಧಿಕಾರಿ ನೇಮಿಸಲು ಸರ್ಕಾರವು ನಿರ್ಧರಿಸಿ ಶ್ರೀ ಕೆ. ಜೈರಾಜ್, ಭಾ.ಆ.ಸೇ. (ನಿವೃತ್ತ) ಅಂದಿನ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಗಳು ಇವರನ್ನು ಆಡಳಿತಾಧಿಕಾರಿಯನ್ನಾಗಿ ದಿನಾಂಕ: 26.05.2012ರಿಂದ ಎರಡು ವರ್ಷಗಳ ಅವಧಿಗೆ ನೇಮಕ ಮಾಡಿ ಆದೇಶಿಸಲಾಗಿತ್ತು. ಇದರ ಜೊತೆಗೆ ಸರ್ಕಾರವು ಆಡಳಿತಾಧಿಕಾರಿಗೆ ಸೂಕ್ತ ಮಾರ್ಗದರ್ಶನ ನೀಡಲು ಭಾರತದ ಸರ್ವೋಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಾಧೀಶರಾದ ಶ್ರೀ ಎಂ.ಎನ್.ವೆಂಕಟಾಚಲಯ್ಯ, ಕರ್ನಾಟಕ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯ ಮೂರ್ತಿಗಳಾದ ಶ್ರೀ ಎಸ್.ಆರ್.ವೆಂಕಟೇಶಮೂರ್ತಿ ಹಾಗೂ ಇತರ ಗಣ್ಯರನ್ನೊಳಗೊಂಡಂತೆ ಒಂದು ಸಲಹಾ ಸಮಿತಿಯನ್ನು ರಚಿಸಲಾಗಿತ್ತು. ಅದರಂತೆ ಓದಲಾದ (1)ರ ಸರ್ಕಾರದ ಆದೇಶದನ್ವಯ ಸದರಿ ಆಡಳಿತಾಧಿಕಾರಿಯು ದಿನಾಂಕ: 26.05.2012ರಂದು ಶ್ರೀಮಠದ ಅಧಿಕಾರವನ್ನು ವಹಿಸಿಕೊಂಡಿರುತ್ತಾರೆ. ತರುವಾಯ, ಸದರಿ ಆಡಳಿತಾಧಿಕಾರಿಯ ಅಧಿಕಾರ ಅವಧಿಯನ್ನು ಸರ್ಕಾರವು ಮೇಲೆ ಓದಲಾದ (2) ಸರ್ಕಾರದ ಆದೇಶ ದಿನಾಂಕ: 24.05.2014ರಲ್ಲಿ ಒಂದು ವರ್ಷದ ಅವಧಿಗೆ ಮುಂದುವರೆಸಿ, ಆದೇಶಿಸಲಾಗಿತ್ತು.

ನಂತರ ಮೇಲೆ ಓದಲಾದ (3)ರ ಸರ್ಕಾರದ ಆದೇಶ ದಿನಾಂಕ: 21.05.2015ರಲ್ಲಿ 2012ರಲ್ಲಿ ಯಾವ ಉದ್ದೇಶಕ್ಕಾಗಿ ಶ್ರೀಮಠದ ಆಡಳಿತಾಧಿಕಾರವನ್ನು ಸರ್ಕಾರವು ವಹಿಸಿಕೊಂಡಿತ್ತೋ ಆ ಉದ್ದೇಶವನ್ನು ಇನ್ನೂ ಸಾಧಿಸಬೇಕಾಗಿರುವುದರಿಂದ ಆಡಳಿತಾಧಿಕಾರಿಗೆ ಹೆಚ್ಚಿನ ಕಾಲಾವಕಾಶ ನೀಡುವುದು ಅವಶ್ಯಕವಾಗಿರುವ ಹಿನ್ನೆಲೆಯಲ್ಲಿ ಸದರಿಯವರ ಆಡಳಿತದ ಅವಧಿಯನ್ನು ದಿನಾಂಕ: 26.05.2015ರಿಂದ ಒಂದು ವರ್ಷದ ಅವಧಿಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ (4)ರಲ್ಲಿ ಆಡಳಿತಾಧಿಕಾರಿ, ಶ್ರೀ ವ್ಯಾಸರಾಜ ಮಠ (ಸೋಸಲೆ) ಇವರ ಪತ್ರದಲ್ಲಿ ಸದರಿಯವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಿದ ನಂತರ ಹಲವಾರು ದೇವಾಲಯದ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದ್ದು, ಇದಲ್ಲದೇ, ದೇವಾಲಯದ ಆದಾಯವು ₹. 2.36 ಕೋಟಿಗಳಷ್ಟು ಆದಾಯ ಉಳಿತಾಯವಾಗಿರುತ್ತದೆ. ಇನ್ನು ಹೆಚ್ಚಿನ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಬೇಕಾಗಿರುವುದರಿಂದ ಮುಂದಿನ ಒಂದು ವರ್ಷದ ಅವಧಿಗೆ ಆಡಳಿತಾಧಿಕಾರಿಗಳ ಅವಧಿಯನ್ನು ಮುಂದುವರೆಸಿ ಆದೇಶಿಸುವಂತೆ ಕೋರಿರುತ್ತಾರೆ. ಅದರಂತೆ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 34 ಮುಸೇವಿ 2014(ಭಾ), ಬೆಂಗಳೂರು, ದಿನಾಂಕ: 17.05.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ವ್ಯಾಸರಾಜ ಮಠದ (ಸೋಸಲೆ) ಆಡಳಿತ ನಿರ್ವಹಣೆ ಹಾಗೂ ಅಭಿವೃದ್ಧಿ ಹಿತದೃಷ್ಟಿಯಿಂದ ಶ್ರೀ ಕೆ.ಜೈರಾಜ್, ಭಾ.ಆ.ಸೇ., (ನಿವೃತ್ತ) ಆಡಳಿತಾಧಿಕಾರಿ ಇವರ ಆಡಳಿತದ ಅವಧಿಯನ್ನು ದಿನಾಂಕ: 26.05.2016ರಿಂದ ಒಂದು ವರ್ಷದ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್.ನಾಗರತ್ನಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

## REVENUE SECRETARIAT

**Sub :** Continuation of the term of the Office of the Administrator, Sri Vyasaraja Mutt (Sosale).

**Ref :** 1) Government Order No. RD 67 MUDAPRA 2002, Dated: 26.05.2012.

2) Government Order No. RD 34 MUSEVI 2014, Dated: 24.05.2014.

3) Government Order No. RD 34 MUSEVI 2014, Dated: 21.05.2015.

4) Administrator, Sri Vyasaraja Mutt (Sosale) letter No. ADM/22/SVM/2012(P), Dated: 05.04.2016.

**PREAMBLE:**

Government of Karnataka had decided and ordered to take over management and properties with all assets, both moveable and immovable, records, accounts, funds of Sri Vyasaraja Mutt (Sosale) and all its attendant branches and properties located in various parts of the Country, vide order at reference (1) above and had appointed Sri K.Jairaj, IAS., (now Retd), the then Additional Chief Secretary to Government of Karnataka, as Administrator, to manage the affairs of the Mutt for an initial period of Two years with effect from 26.05.2012. The Government of Karnataka had also appointed an Advisory Committee consisting of eminent personalities namely, Justice M.N.Venkatachalaiah, former Chief Justice of India, Justice S.R.Venkatesha Murthy, former Judge, High Court of Karnataka and others, to guide the Administrator in day to day affairs of the Mutt. The Administrator, accordingly took charge of the affairs of the Mutt on 26.05.2012. Subsequently, the term of the Administrator was extended vide reference (2) above for a period of One year on 24.05.2014.

Again, on 21.05.2015 vide Government Order referred at (3) above, Government upon careful consideration of the matter to fulfill the objectives for which the administration was taken over in 2012 and that, additional time needs to be provided to the Administrator to complete pressing and ongoing tasks mentioned above, had extended the term of Office of the Administrator, for One year from 26.05.2015.

The Administrator has reported vide reference (4) above, that, after takeover of the administration, he has initiated several steps for taking up renovation and modernization works. Apart from this, a total surplus of ₹. 2.36 crores has been saved. Further, the term of the Administrator will conclude on 25.05.2016 and that there are several urgent and pressing works which have still not been completed, the Administrator has requested the Government to extend the term of the Administrator for a further period of One year. The proposal has been examined by the Government and following orders are issued:

**GOVERNMENT ORDER NO. RD 34 MUSEVI 2014(P), BENGALURU, DATED: 17.05.2016.**

In view of the circumstances explained above and upon careful consideration of the matter, the Government hereby extend the term of office of Sri K.Jairaj, IAS (Retd) Administrator, Sri Vyasaraja Mutt (Sosale), for a further period of One year from 26.05.2016.

**P.R. 536**

**SC – 50**

By Order and in the name of the Governor of Karnataka,

**B.S.NAGARATHNAMMA,**

Under Secretary to Government,
Revenue Department (Muzrai).

## ಸಹಕಾರ ಸಚಿವಾಲಯ

**ವಿಷಯ :** ದಿನಾಂಕ: 23.03.2016ರಂದು ಜರುಗಿದ ಮಂಡಳಿಯ ಪ್ರಧಾನ ಸಭೆಯ ತೀರ್ಮಾನದಂತೆ ರೈತ ಸಂಜೀವಿನಿ ಪರಿಹಾರ ಮೊತ್ತ ಪರಿಷ್ಕರಿಸುವ ಕುರಿತು ಆದೇಶ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಸಇ 157 ಎಂಆರ್‌ಇ 2014, ದಿನಾಂಕ: 23.07.2014.

2) ಮುಖ್ಯ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿ ಇವರ ಪತ್ರ ಸಂಖ್ಯೆ: ಕೃಮಾಮಂ/1267/2016–17, ದಿನಾಂಕ: 30.04.2016.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 23.07.2014ರ ಸರ್ಕಾರಿ ಆದೇಶದಲ್ಲಿ ದಿನಾಂಕ: 01.04.2001ರಿಂದ ಜಾರಿಗೆ ತಂದಿರುವ ರೈತ ಸಂಜೀವಿನಿ ಅಪಘಾತ ವಿಮೆ ಪರಿಷ್ಕೃತ ಯೋಜನೆಯನ್ನು ಮರು ಪರಿಷ್ಕೃತ ರೈತ ಸಂಜೀವಿನಿ ನಿಯಮಗಳನ್ನು ದಿನಾಂಕ: 05.07.2014ರಿಂದ ಅನ್ವಯವಾಗುವಂತೆ ಜಾರಿಗೆ ತರಲಾಗಿದೆ.

ಮೇಲೆ (2)ರಲ್ಲಿ ಓದಲಾದ ಮುಖ್ಯ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿ ಇವರ ದಿನಾಂಕ: 30.04.2016ರ ಪತ್ರದಲ್ಲಿ ಮಾನ್ಯ ತೋಟಗಾರಿಕೆ ಮತ್ತು ಕೃಷಿ ಮಾರುಕಟ್ಟೆ ಸಚಿವರು ಹಾಗೂ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಯ ಪದನಿಮಿತ್ತ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ ದಿನಾಂಕ: 23.03.2016ರಂದು ಜರುಗಿದ ಮಂಡಳಿಯ ಪ್ರಧಾನ ಸಭೆಯಲ್ಲಿ ವಿಷಯ ಸಂ:2(9ಆ)ರಡಿಯಲ್ಲಿ ಚರ್ಚಿಸಿ ನಿರ್ಣಯಿಸಿದಂತೆ ಈ ಕೆಳಕಂಡಂತೆ ರೈತ ಸಂಜೀವಿನಿ ವಿಮಾ ಪರಿಹಾರ ಕುರಿತು ಪರಿಷ್ಕೃತ ಆದೇಶವನ್ನು ಹೊರಡಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ. ಸಂ. | ವಿವರ | ಪ್ರಸ್ತುತ ಪರಿಹಾರದ ಮೊತ್ತ | ಪರಿಷ್ಕರಿಸಬೇಕಾದ ಪರಿಹಾರದ ಮೊತ್ತ |
|---|---|---|---|
| 1. | ಎರಡು ಕೈಗಳು ಅಥವಾ ಎರಡು ಕಾಲುಗಳನ್ನು ಕಳೆದುಕೊಂಡಾಗ | 30,000.00 | 50,000.00 |
| 2. | ಎರಡು ಕಣ್ಣುಗಳನ್ನು ಕಳೆದುಕೊಂಡಾಗ | 30,000.00 | 50,000.00 |
| 3. | ಒಂದು ಕಣ್ಣು ಕಳೆದುಕೊಂಡಾಗ | 15,000.00 | 30,000.00 |
| 4. | ಒಂದು ಕೈ ಅಥವಾ ಒಂದು ಕಾಲನ್ನು ಕಳೆದುಕೊಂಡಾಗ | 15,000.00 | 30,000.00 |
| 5. | ಕೈ ಅಥವಾ ಕಾಲುಗಳ ಬೆರಳನ್ನು ಕಳೆದುಕೊಂಡಾಗ (ಪ್ರತಿ ಬೆರಳಿಗೆ) | 5,000.00 | 10,000.00 |
| 6. | ಸೊಂಟ ಮುರಿದಾಗ | 30,000.00 | 50,000.00 |

ಮುಖ್ಯ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 173 ಎಂಆರ್‌ಇ 2016, ಬೆಂಗಳೂರು, ದಿನಾಂಕ: 29.07.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರೈತರು ಕೃಷಿ ಚಟುವಟಿಕೆಗಳಲ್ಲಿ ತೊಡಗಿದ ಸಂದರ್ಭದಲ್ಲಿ ಆಕಸ್ಮಿಕಗಳು ಸಂಭವಿಸಿ ಆಗಬಹುದಾದಂತಹ ಅಂಗವಿಕಲತೆಯನ್ನು ಗಮನಿಸಿ ಶೇ. 70 ಹಾಗೂ ಅದಕ್ಕೂ ಹೆಚ್ಚಿನ ಅಂಗವಿಕಲತೆ ಉಂಟಾದಂತಹ ಸಂದರ್ಭದಲ್ಲಿ ಜಿಲ್ಲಾ ಆರೋಗ್ಯ ಅಧಿಕಾರಿಗಳು ನೀಡುವ ಅಂಗವಿಕಲತೆ ಪ್ರಮಾಣ ಪತ್ರದ ಆಧಾರದ ಮೇಲೆ ಅರ್ಹ ರೈತ ಫಲಾನುಭವಿಗಳಿಗೆ ಪರಿಹಾರಧನವನ್ನು ಈ ಕೆಳಕಂಡಂತೆ ಪರಿಷ್ಕರಿಸಿ ಆದೇಶಿಸಿದೆ.

| ಕ್ರ. ಸಂ. | ವಿವರ | ಪ್ರಸ್ತುತ ಪರಿಹಾರದ ಮೊತ್ತ | ಪರಿಷ್ಕರಿಸಲಾದ ಪರಿಹಾರದ ಮೊತ್ತ |
|---|---|---|---|
| 1. | ಎರಡು ಕೈಗಳು ಅಥವಾ ಎರಡು ಕಾಲುಗಳನ್ನು ಕಳೆದುಕೊಂಡಾಗ | 30,000.00 | 50,000.00 |
| 2. | ಎರಡು ಕಣ್ಣುಗಳನ್ನು ಕಳೆದುಕೊಂಡಾಗ | 30,000.00 | 50,000.00 |

| | | | |
|---|---|---|---|
| 3. | ಒಂದು ಕಣ್ಣು ಕಳೆದುಕೊಂಡಾಗ | 15,000.00 | 30,000.00 |
| 4. | ಒಂದು ಕೈ ಅಥವಾ ಒಂದು ಕಾಲನ್ನು ಕಳೆದುಕೊಂಡಾಗ | 15,000.00 | 30,000.00 |
| 5. | ಕೈ ಅಥವಾ ಕಾಲುಗಳ ಬೆರಳನ್ನು ಕಳೆದುಕೊಂಡಾಗ (ಪ್ರತಿ ಬೆರಳಿಗೆ) | 5,000.00 | 10,000.00 |
| 6. | ಸೊಂಟ ಮುರಿದಾಗ | 30,000.00 | 50,000.00 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 537**

**S.C – 50**

**ಎಲ್.ಸಿ. ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ – 1,

ಸಹಕಾರ ಇಲಾಖೆ.

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನ ಶಾಸ್ತ್ರ ಸಚಿವಾಲಯ

**ವಿಷಯ :** ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿ ದ್ವಿಗುಣ ಬಲವರ್ಧಿತ ಉಪ್ಪನ್ನು ವಿತರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಆನಾಸ 204 ಡಿಆರ್‌ಎ 2015, ದಿನಾಂಕ: 07.04.2015.

2) ಕೇಂದ್ರ ಸರ್ಕಾರದ ದಿನಾಂಕ: 19.02.2016ರಂದು ಪಿಡಿಎಸ್ ವಸ್ತುಗಳ ಬಲವರ್ಧನೆಯ ಬಗ್ಗೆ ನಡೆದ ಸಭೆಯ ಸಭಾ ನಡವಳಿ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರಿ ಆದೇಶದಂತೆ, ಮೇ – 2015ರ ಮಾಹೆಯಿಂದ ರಾಜ್ಯದ ಪಡಿತರ ವಿತರಣಾ ವ್ಯವಸ್ಥೆಯಡಿ ಎಎವೈ ಮತ್ತು ಆದ್ಯತಾ ಕುಟುಂಬಗಳಿಗೆ ಪ್ರತಿ ಮಾಹೆ ರಿಯಾಯಿತಿ ದರದಲ್ಲಿ ಅಂದರೆ ₹. 2/–ರಂತೆ ಒಂದು ಕೆ.ಜಿ. ಆಯೋಡಿನ್‌ಯುಕ್ತ ಉಪ್ಪನ್ನು ವಿತರಿಸಲಾಗುತ್ತಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಕೇಂದ್ರ ಸರ್ಕಾರದ ಸಭಾ ನಡವಳಿಯಲ್ಲಿ ದೇಶದಲ್ಲಿ ಅಪೌಷ್ಟಿಕತೆ ಮತ್ತು ರಕ್ತಹೀನತೆಯ ಸಮಸ್ಯೆಯನ್ನು ನಿವಾರಿಸಲು ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿ ವಿತರಿಸಲಾಗುವ ಪಡಿತರ ವಸ್ತುಗಳನ್ನು ಕಿರು ಪೌಷ್ಟಿಕಾಂಶಗಳನ್ನು ಸೇರಿಸುವ ಮೂಲಕ ಬಲವರ್ಧಿಸಿ ವಿತರಿಸಲು ರಾಜ್ಯಗಳಿಗೆ ನಿರ್ದೇಶನ ನೀಡಲಾಗಿರುತ್ತದೆ.

ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿಯಲ್ಲಿ ವಿತರಿಸಲಾಗುತ್ತಿರುವ ಉಪ್ಪಿಗೆ ಕಬ್ಬಿಣಾಂಶವನ್ನು ಹೆಚ್ಚುವರಿಯಾಗಿ ಸೇರಿಸಿ ಬಲವರ್ಧನೆಗೊಳಿಸಲು ಕೇಂದ್ರ ಸರ್ಕಾರದ ಶಿಫಾರಸ್ಸುಗಳು ಮತ್ತು ಹೈದರಾಬಾದ್‌ನಲ್ಲಿರುವ ಕೇಂದ್ರೀಯ ಪೌಷ್ಟಿಕಾಂಶ ಸಂಸ್ಥೆಯ ಶಿಫಾರಸ್ಸುಗಳ ಆಧಾರದಲ್ಲಿ ಅಯೋಡಿನ್ ಮತ್ತು ಕಬ್ಬಿಣಾಂಶ ಹೊಂದಿರುವ ದ್ವಿಗುಣ ಬಲವರ್ಧಿತ ಉಪ್ಪನ್ನು ವಿತರಿಸಲು ಉದ್ದೇಶಿಸಿದೆ. ಉಪ್ಪಿನ ಮೂಲಕ ಕಿರು ಪೌಷ್ಟಿಕಾಂಶಗಳು ಅಂದರೆ, ಅಯೋಡಿನ್ ಮತ್ತು ಕಬ್ಬಿಣಾಂಶಗಳನ್ನು ಸಮಾನ ಪ್ರಮಾಣದಲ್ಲಿ ಸೇವಿಸಬಹುದಾಗಿದ್ದು ಇದರಿಂದ ರಕ್ತಹೀನತೆ (ಅನೀಮಿಯಾ) ಸಮಸ್ಯೆಯನ್ನು ಕಡಿಮೆಗೊಳಿಸುವ ಹಾಗೂ ಕಬ್ಬಿಣಾಂಶವನ್ನು ಹೆಚ್ಚಿಸುವ ಉಪಯುಕ್ತತೆ ಬಗ್ಗೆ ಪ್ರತಿಪಾದಿಸಲಾಗಿರುತ್ತದೆ. ಅಯೋಡಿನ್ ಮತ್ತು ಕಬ್ಬಿಣಾಂಶ ಹೊಂದಿರುವ ದ್ವಿಗುಣ ಬಲವರ್ಧಿತ ಉಪ್ಪನ್ನು ವಿತರಿಸಲು ಉದ್ದೇಶಿಸಿದೆ. ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 136 ಡಿಆರ್‌ಎ 2016, ಬೆಂಗಳೂರು, ದಿನಾಂಕ: 29.07.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಅಕ್ಟೋಬರ್ – 2016ರ ಮಾಹೆಯಿಂದ ಜಾರಿಗೆ ಬರುವಂತೆ ರಾಜ್ಯದ ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿ ಎಎವೈ ಮತ್ತು ಆದ್ಯತಾ ಕುಟುಂಬಗಳಿಗೆ ಪ್ರತಿ ಮಾಹೆ ಪ್ರತಿ ಪಡಿತರ ಚೀಟಿಗೆ ರಿಯಾಯಿತಿ ದರದಲ್ಲಿ ಪ್ರತಿ ಕೆ.ಜಿ.ಗೆ ₹. 2/ (ಎರಡು)ರಂತೆ ಅಯೋಡಿನ್ ಮತ್ತು ಕಬ್ಬಿಣಾಂಶಯುಕ್ತ ಒಂದು ಕೆ.ಜಿ. ದ್ವಿಗುಣ ಬಲವರ್ಧಿತ ಉಪ್ಪನ್ನು ವಿತರಿಸಲು ಆದೇಶಿಸಿದೆ.

ಈ ಆದೇಶವನ್ನು ಯೋಜನಾ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 69 ಐಎಂಎಂ 2016, ದಿನಾಂಕ: 04.06.2016ರಲ್ಲಿ ನೀಡಿರುವ ಸಹಮತಿಯನ್ವಯ ಹಾಗೂ ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 667 ವೆಚ್ಚ–5/2016, ದಿನಾಂಕ: 19.07.2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

**P.R. 539**

**S.C – 200**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅರ್ಚನ ಎಂ.ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ

ಹಾಗೂ ಕಾನೂನು ಮಾಪನ ಶಾಸ್ತ್ರ ಇಲಾಖೆ.

## ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

**ವಿಷಯ :** ಸಂಕಷ್ಟದಲ್ಲಿರುವ ಪತ್ರಕರ್ತರಿಗೆ ನೀಡುತ್ತಿರುವ ಮಾಸಾಶನದ ಮೊತ್ತವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 17 ವಾಪ್ರಪ 2014, ದಿನಾಂಕ: 25.07.2014.

2) ನಿರ್ದೇಶಕರು, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ಇವರ ಪತ್ರ ಸಂಖ್ಯೆ: DIPR/14013 C11/1/2016-DIPR-PN-DIPR/1328, ದಿನಾಂಕ: 05.05.2016.

**ಪ್ರಸ್ತಾವನೆ:**

ಸನ್ಮಾನ್ಯ ಮುಖ್ಯಮಂತ್ರಿಯವರು ಪ್ರಸಕ್ತ 2016–17ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸಂಕಷ್ಟದಲ್ಲಿರುವ ಪತ್ರಕರ್ತರಿಗೆ ಪ್ರಸ್ತುತ ರಾಜ್ಯ ಸರ್ಕಾರ ನೀಡುತ್ತಿರುವ ಮಾಸಾಶನ ಮೊತ್ತವನ್ನು ₹. 6,000/– ಗಳಿಂದ ₹. 8,000/– ಗಳಿಗೆ ಹೆಚ್ಚಿಸುವುದಾಗಿ ಘೋಷಿಸಿರುತ್ತಾರೆ.

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸಂಕಷ್ಟದಲ್ಲಿರುವ ಪತ್ರಕರ್ತರಿಗೆ ಮಾಸಾಶನವನ್ನು ₹. 3,000/– ರಿಂದ ₹. 6,000/–ಗಳಿಗೆ ಹೆಚ್ಚಿಸಲಾಗಿದೆ. ಅದರಂತೆ ಹಾಲಿ 200 ಜನ ಸಂಕಷ್ಟದಲ್ಲಿರುವ ಪತ್ರಕರ್ತರು ಮಾಸಿಕ ₹. 6,000/– ರಂತೆ ಮಾಸಾಶನ ಪಡೆಯುತ್ತಿರುತ್ತಾರೆ. ಅಲ್ಲದೆ, 2015–16ನೇ ಸಾಲಿನ ದಿನಾಂಕ: 15.06.2015ರಂದು ನಡೆದ ಮಾಸಾಶನ ಸಭೆಯಲ್ಲಿ ಬಂದಂತಹ 72 ಅರ್ಜಿಗಳನ್ನು ಸಮಿತಿಯು ಪರಿಶೀಲಿಸಿ ಸುಮಾರು 42 ಸಂಕಷ್ಟದಲ್ಲಿರುವ ಪತ್ರಕರ್ತರಿಗೆ ಮಾಸಾಶನ ಮಂಜೂರು ಮಾಡಲಾಗಿ ಒಟ್ಟು ರಾಜ್ಯದಲ್ಲಿ ಅಂದಾಜು 242 ಜನ ಮಾಸಾಶನ ಪಡೆಯುತ್ತಿರುತ್ತಾರೆ. ಹಾಲಿ ಲೆಕ್ಕ ಶೀರ್ಷಿಕೆ 2220–60–105–0–01 ಪತ್ರಿಕೋದ್ಯಮಿಗಳ ಕಲ್ಯಾಣ ಕಾರ್ಯಕ್ರಮಗಳು 100 ಧನ ಸಹಾಯ/ಪರಿಹಾರ ಯೋಜನೇತರ ಅಡಿಯಲ್ಲಿ ವಾರ್ಷಿಕ ₹. 1,74,24,000/–ಗಳು ವೆಚ್ಚವಾಗುತ್ತಿದ್ದು, ಮಾಸಾಶನ ಮೊತ್ತವನ್ನು ₹. 6,000/– ರಿಂದ ₹. 8,000/– ಗಳಿಗೆ ಹೆಚ್ಚಿಸುವುದಾಗಿ ಪ್ರಕಟಿಸಿದ ಹಿನ್ನೆಲೆಯಲ್ಲಿ 2016–17ನೇ ಸಾಲಿನಲ್ಲಿ ₹. 2,32,32,000/– ಗಳ ಅನುದಾನದ ಅವಶ್ಯಕತೆ ಇರುತ್ತದೆಂದು, ಅದರನ್ವಯ ಸಂಕಷ್ಟದಲ್ಲಿರುವ ಪತ್ರಕರ್ತರಿಗೆ ಪ್ರಸ್ತುತ ರಾಜ್ಯ ಸರ್ಕಾರ ನೀಡುತ್ತಿರುವ ಮಾಸಾಶನ ಮೊತ್ತವನ್ನು ₹. 6,000/– ಗಳಿಂದ ₹. 8,000/– ಗಳಿಗೆ ಹೆಚ್ಚಿಸಿ, ಲೆಕ್ಕ ಶೀರ್ಷಿಕೆ 2220–60–105–0–01 ಪತ್ರಿಕೋದ್ಯಮಿಗಳ ಕಲ್ಯಾಣ ಕಾರ್ಯಕ್ರಮಗಳು 100 ಧನ ಸಹಾಯ/ಪರಿಹಾರ ಯೋಜನೇತರ ಅಡಿಯಲ್ಲಿ ಒದಗಿಸಿರುವ ₹. 174.00 ಲಕ್ಷಗಳನ್ನು ₹. 232.32 ಲಕ್ಷಗಳಿಗೆ ಹೆಚ್ಚಿಸಿ ಸರ್ಕಾರಿ ಆದೇಶ ಹೊರಡಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾ 12 ವಾಪ್ರಪ 2016, ಬೆಂಗಳೂರು, ದಿನಾಂಕ: 23.07.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಂಕಷ್ಟದಲ್ಲಿರುವ ಪತ್ರಕರ್ತರಿಗೆ ಹಾಲಿ ನೀಡುತ್ತಿರುವ ಮಾಸಾಶನವನ್ನು ₹. 6,000/– ರಿಂದ ₹. 8,000/– ಗಳಿಗೆ (ಎಂಟು ಸಾವಿರ ರೂಪಾಯಿಗಳು ಮಾತ್ರ) ತಕ್ಷಣದಿಂದ ಜಾರಿಗೆ ಬರುವಂತೆ ಹೆಚ್ಚಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಈ ಉದ್ದೇಶಕ್ಕಾಗಿ ತಗಲುವ ವೆಚ್ಚವನ್ನು 2016–17ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2220–60–105–0–01–100 (ಯೋಜನೇತರ) ಪತ್ರಿಕೋದ್ಯಮಿಗಳ ಕಲ್ಯಾಣ ಕಾರ್ಯಕ್ರಮಗಳು ಅಡಿಯಲ್ಲಿ ಒದಗಿಸಿರುವ ಅನುದಾನ ಮತ್ತು ಹೆಚ್ಚುವರಿಯಾಗಿ ಕೋರಿರುವ ₹. 58.32 ಲಕ್ಷ (ಐವತ್ತೆಂಟು ಲಕ್ಷದ ಮೂವತ್ತೆರಡು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಸದರಿ ಲೆಕ್ಕಶೀರ್ಷಿಕೆ ಅಡಿಯಲ್ಲಿ ಪೂರಕ ಅಂದಾಜು – 1ರಲ್ಲಿ ಒದಗಿಸಲಾಗುವ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಹಿಂಬರಹ ಸಂಖ್ಯೆ: ಯೋಇ 89 ಜಶ 2016, ದಿನಾಂಕ: 11.07.2016 ಹಾಗೂ ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 373 ವೆಚ್ಚ–7/2016, ದಿನಾಂಕ: 24.06.2016ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಯಶ್ರೀ ಎಸ್.ಎನ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ.

**P.R. 538**

## ಸಹಕಾರ ಸಚಿವಾಲಯ

**ವಿಷಯ :** 2016–17ನೇ ಸಾಲಿಗೆ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯ ನೋಂದಣಿ ದಿನಾಂಕ ವಿಸ್ತರಿಸಲು ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ:ಸಿಒ/162/ಸಿಎಲ್ಎಸ್/2015, ಬೆಂಗಳೂರು ದಿನಾಂಕ: 15–04–2016.
2. ಈ ಕಛೇರಿ ಸಮಸಂಖ್ಯೆ ಆದೇಶದ ದಿನಾಂಕ: 01–06–2016.

**ಪ್ರಸ್ತಾವನೆ:**

2016–17ನೇ ಸಾಲಿನ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯನ್ನು ಮೇಲೆ ಓದಲಾದ (1)ರ ಸರ್ಕಾರದ ಆದೇಶದಂತೆ ಜಾರಿಗೊಳಿಸಿ (2)ರ ಸರ್ಕಾರದ ಆದೇಶದಂತೆ ನೋಂದಣಿ ದಿನಾಂಕವನ್ನು ವಿಸ್ತರಿಸಿದ್ದು, ವಿಸ್ತರಿಸಿದ ಅವಧಿ ದಿನಾಂಕ:31.07.2016ಕ್ಕೆ ಕೊನೆಗೊಳ್ಳುತ್ತದೆ. ದಿನಾಂಕ: 23–07–2016ರವರೆಗೆ ಈ ಯೋಜನೆಯಲ್ಲಿ ಕೇವಲ 15,28,374 ಸದಸ್ಯರು ಮಾತ್ರ ನೋಂದಣಿಯಾಗಿರುತ್ತಾರೆ. ರಾಜ್ಯದಲ್ಲಿ ಬರಗಾಲದಿಂದಾಗಿ, ಡಿಸಿಸಿ ಬ್ಯಾಂಕುಗಳು ಈಗ ಸಾಲ ವಿತರಣೆ ಮಾಡುತ್ತಿರುವುದರಿಂದ ಈ ಯೋಜನೆಯಡಿ ಹೆಚ್ಚಿನ ಸಂಖ್ಯೆಯ ಸದಸ್ಯರನ್ನು ನೋಂದಣಿ ಮಾಡಲು ನೋಂದಣಿ ದಿನಾಂಕವನ್ನು ವಿಸ್ತರಿಸುವುದು ಅವಶ್ಯವಾಗಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ/162/ಸಿಎಲ್ಎಸ್/2015, ಬೆಂಗಳೂರು, ದಿನಾಂಕ: 03–08–2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸದಸ್ಯರ ನೋಂದಾವಣೆ ಅವಧಿಯನ್ನು ದಿನಾಂಕ: 31–08–2016ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

**PR. 546**
**SC. 100**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವೆಂಕಟಸ್ವಾಮಿ,**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** 2016-17ನೇ ಸಾಲಿಗೆ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯನ್ನು ಮುಂದುವರೆಸಲು ಹಾಗೂ ಹೊಸ ಸದಸ್ಯರುಗಳನ್ನು ನೋಂದಾಯಿಸಲು ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ:ಸಿಒ/162/ಸಿಎಲ್ಎಸ್/2015, ಬೆಂಗಳೂರು ದಿನಾಂಕ: 15-04-2016.

2. ಈ ಕಛೇರಿ ಸಮಸಂಖ್ಯೆ ಆದೇಶದ ದಿನಾಂಕ: 01-06-2016.

**ಪ್ರಸ್ತಾವನೆ:**

2016-17ನೇ ಸಾಲಿನ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯನ್ನು ಮೇಲೆ ಓದಲಾದ (1)ರ ಸರ್ಕಾರದ ಆದೇಶದಂತೆ ಜಾರಿಗೊಳಿಸಿ (2)ರ ಸರ್ಕಾರದ ಆದೇಶದಂತೆ ನೋಂದಣಿ ದಿನಾಂಕವನ್ನು ವಿಸ್ತರಿಸಿದ್ದು, ವಿಸ್ತರಿಸಿದ ಅವಧಿ ದಿನಾಂಕ: 31-07-2016ಕ್ಕೆ ಕೊನೆಗೊಳ್ಳುತ್ತದೆ. ದಿನಾಂಕ: 23-07-2016ರವರೆಗೆ ಈ ಯೋಜನೆಯಲ್ಲಿ ಕೇವಲ 73,164 ಸದಸ್ಯರು ಮಾತ್ರ ನೋಂದಣಿಯಾಗಿರುತ್ತಾರೆ. ಈ ಯೋಜನೆಯಡಿ ಹೆಚ್ಚಿನ ಸಂಖ್ಯೆಯ ಸದಸ್ಯರನ್ನು ನೋಂದಣಿ ಮಾಡಲು ನೋಂದಣಿ ದಿನಾಂಕವನ್ನು ವಿಸ್ತರಿಸುವುದು ಅವಶ್ಯವಾಗಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ/163/ಸಿಎಲ್ಎಸ್/2015 ಬೆಂಗಳೂರು, ದಿನಾಂಕ: 03-08-2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸದಸ್ಯರ ನೋಂದಾವಣೆ ಅವಧಿಯನ್ನು ದಿನಾಂಕ: 31-08-2016ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವೆಂಕಟಸ್ವಾಮಿ,**

ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ,

ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR. 547**

**SC. 100**

## HOME SECRETARIAT

**Sub:** Consitution of Coastal State/UT level Committees and Coastal District level Committees in the Costal States/UTs to monitor, manage and steer various issues pertaining to Coastal Security at these levels - Revised order reg.

**Read:** 1) Ministry of Home Affairs, (Department of Border Management), Office Order No.5/23/2016-Coastal Security, dated: 14/06/2016.

2) Home Department, Government of Karnataka Order of even No. dated: 15/06/2016.

**PREAMBLE:**

Ministry of Home Affairs in its Office Order dated:14/06/2016, read above has informed that as per discussion held during the Costal Security review meeting held on 6th June, 2016 under the Chairmanship of Hon'ble Union Home Minister, it had been decided to constitute State/UT level Coastal Security Committees and District level Coastal Secutity Committees in the Coastal States/UTs to monitor, manage and steer the various issues of the Coastal Security at these levels and has also directed the composition and terms of reference for constituting these committees.

Home Department, Government of Karnataka had, vide reference (2) above, issued Order on the subject. However in view of the directions of the Ministry of Home Affairs, Government Order issued on 15/06/2016 needs revision. Hence the following Order:

**GOVERNMENT ORDER No. HD 185 SST 2016, BENGALURU, DATED: 30/07/2016.**

Government is pleased to constitute the following State Level and District Level Coastal Security Committees with immediate effect in the interest of National Security in Order to provide a formal review mechanism for Coastal Security.

**(i) STATE LEVEL COASTAL SECURITY COMMITTEE**

| | | |
|---|---|---|
| 1) | Chief Secretary to Government | Chairman |
| 2) | Additional Chief Secretary to Government, Home Department. | Member-Secretary |
| 3) | Director General & Inspector General of Police | Member |
| 4) | Representative of Ministry of Home Affairs(MHA), Govt. of India | Member |
| 5) | Representative of intelligence Bureau, MHA, Govt, of India | Member |
| 6) | Director General of Police (internal Security Division) | Member |

| | | |
|---|---|---|
| 7) | Principal Secretary to Government, PWD | Member |
| 8) | Principal Secretary to Government, AH & F Department | Member |
| 9) | Principal Secretary to Government, Revenue Department | Member |
| 10) | Principal Secretary to Government, Tourism | Member |
| 11) | Naval Officer-in-Charge, Karnataka (NOIC-KTK) | Member |
| 12) | District Magistrate, Dakshina Kannada District | Member |
| 13) | District Magistrate, Uttara Kannada District | Member |
| 14) | District Magistrate, Udupi District | Member |
| 15) | Commander of Indian Coast Guard, Karnataka | Member |
| 16) | Director of Fisheries | Member |
| 17) | Director of Ports | Member |
| 18) | Director of Tourism | Member |
| 19) | Commissioner of Customs | Member |
| 20) | Representative of M/s Goa Shipyard Ltd., Goa | Member |

**Terms of Reference:**

(i) The Committee will monitor relevant aspects of the Coastal security as assigned by MHA;

(ii) The Committee may review the functioning & monitoring of Coastal District level Committees;

(iii) The Chairman of the Committee may incorporate appropriate Members as Special Invitees for specific issues;

(iv) The State Level Committee will meet every six months.

**DISTRICT LEVEL COASTAL SECURITY COMMITTEE**

**(DAKSHINA KANNADA, UTTARA KANNADA & UDUPI DISTRICTS)**

| | | |
|---|---|---|
| 1) | Deputy Commissioner/District Magistrate | Chairman |
| 2) | Commissioner of Police, Mangaluru | Member |
| 3) | SP, Coastal Security Police (CSP) | Member Secretary |
| 4) | Superintendent of Police | Member |
| 5) | Deputy Director, Fisheries | Member |
| 6) | Representative of Port Officer | Member |
| 7) | Deputy Director, Tourism | Member |
| 8) | Representative of Indian Coast Guard | Member |
| 9) | Representative of Customs | Member |
| 10) | Representative of Railways | Member |
| 11) | Representative of Intelligence Bureau | Member |
| 12) | Nominee of Navy/NMPT/MRPL/KAIGA | Members |

**Terms of Reference:**

(i) The District level Committee will discuss/monitor relevant aspects of Coastal Security at field Level;

(ii) The Committee will also deliberate on Various Coordination issues;

(iii) The Committee will meet atleast on a quarterly basis or as often as considered necessary.

By Order and in the name of the Governor of Karnataka,

**K.Padmini Devi,**

Under Secretary to Government,

Home Department. (Law and Order)

**PR. 548**

**SC. 100**

## ಆರ್ಥಿಕ ಸಚಿವಾಲಯ

**ವಿಷಯ :** 2013–14ನೇ ಸಾಲಿನಲ್ಲಿ ದಕ್ಷಿಣ ಕರ್ನಾಟಕದ ಎಂಟು ಸಕ್ಕರೆ ಕಾರ್ಖಾನೆಗಳು ದಿನಾಂಕ: 01/04/2013ರಿಂದ ದಿನಾಂಕ: 21/11/2013ರವರೆಗೆ ಪಾವತಿಸಿರುವ ಕಬ್ಬು ಖರೀದಿ ತೆರಿಗೆ ಮತ್ತು ರಸ್ತೆ ಕರಗಳನ್ನು ಮರುಪಾವತಿ ಮಾಡುವ ಬಗ್ಗೆ.

**ಓದಲಾಗಿದೆ :**
1) ಅಧಿಸೂಚನೆ ಸಂಖ್ಯೆ:ಎಫ್‌ಡಿ 216 ಸಿಎಸ್‌ಎಲ್ 2013, ದಿನಾಂಕ: 22/11/2013.
2) ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ:ಡಿಎಸ್‌ಕೆ/ ಎಸ್‌ಟಿಟಿ/75/2013–14, ದಿನಾಂಕ: 26/12/2013.
3) ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ:ಡಿಎಸ್‌ಕೆ/ ಎಸ್‌ಟಿಟಿ/11/2014–15, ದಿನಾಂಕ 16/01/2015.
4) ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ:ಡಿಎಸ್‌ಕೆ/ ಎಸ್‌ಟಿಟಿ/26/2014–15, ದಿನಾಂಕ: 31/01/2015.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ, 2013–14ನೇ ಸಾಲಿನಲ್ಲಿ ದಿನಾಂಕ:22/11/2013ರಿಂದ ದಿನಾಂಕ: 31/03/2014ರವರೆಗೆ ವಿಧಿಸಲಾದ ಕಬ್ಬು ತೆರಿಗೆ ಮತ್ತು ರಸ್ತೆ ಕರವನ್ನು ವಿನಾಯಿತಿಗೊಳಿಸಿ ಆದೇಶಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯದ ಆಯುಕ್ತರು ರಾಜ್ಯದ ದಕ್ಷಿಣ ಭಾಗದ ಸಕ್ಕರೆ ಕಾರ್ಖಾನೆಗಳು 2013–14ನೇ ಸಾಲಿನ ಕಬ್ಬು ನುರಿಸುವ ಹಂಗಾಮಿಗೆ ನಿಗಧಿಯಾಗಿರುವ ಕಬ್ಬಿನ ಬೆಲೆಯನ್ನು ವಿಶೇಷ ಹಂಗಾಮಿನಲ್ಲಿ ನುರಿಸಿದ ಕಬ್ಬಿಗೂ ಸಹ ಪಾವತಿಸುತ್ತಿರುವುದರಿಂದ ಕಬ್ಬು ಖರೀದಿ ತೆರಿಗೆ ಮತ್ತು ರಸ್ತೆ ಕರ ಮೊತ್ತವನ್ನು ದಿನಾಂಕ: 01/07/2013ರಿಂದ ಜಾರಿಗೆ ಬರುವಂತೆ ಮನ್ನಾ ಮಾಡುವ ಕುರಿತು ಸೂಕ್ತ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ. ಮುಂದುವರಿದು, ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ, ಕಬ್ಬು ಆಯುಕ್ತರು ರಾಜ್ಯದ ದಕ್ಷಿಣ ಭಾಗದ ಸಕ್ಕರೆ ಕಾರ್ಖಾನೆಗಳು ದಿನಾಂಕ:01/07/2013ರಿಂದ ದಿನಾಂಕ: 21/11/2013ರವರೆಗೆ ಸರ್ಕಾರಕ್ಕೆ ಪಾವತಿಸಿರುವ ಕಬ್ಬು ಖರೀದಿ ತೆರಿಗೆ ಮತ್ತು ರಸ್ತೆ ಕರ ಮೊತ್ತದ ವಿವರಗಳನ್ನು ಸಂಬಂಧಿಸಿದ ಕಾರ್ಖಾನೆಗಳಿಂದ ಪಡೆದು ಸಿದ್ಧಪಡಿಸಿರುವ ತಃಖ್ತೆಯನ್ನು ಸಲ್ಲಿಸಿ, ಅದನ್ನು ವಾಣಿಜ್ಯ ತೆರಿಗೆ ಇಲಾಖೆಯಿಂದ ದೃಢೀಕರಿಸಿಕೊಂಡ ನಂತರ ಸೂಕ್ತ ಕ್ರಮ ಕೈಗೊಳ್ಳಲು ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶನಾಲಯದ ಆಯುಕ್ತರ ಕೋರಿಕೆಯನ್ನು ಪರಿಶೀಲಿಸಲಾಗಿದೆ. ರಾಜ್ಯದ ದಕ್ಷಿಣ ಭಾಗದ ಸಕ್ಕರೆ ಕಾರ್ಖಾನೆಗಳು 2013–14ನೇ ಸಾಲಿನ ಕಬ್ಬು ನುರಿಸುವ ಹಂಗಾಮನ್ನು ಜುಲೈ, 2013ರ ಮಾಹೆಯಿಂದ ಪ್ರಾರಂಭಿಸಿರುವುದರಿಂದ ಉಲ್ಲೇಖ (1)ರಲ್ಲಿನ ಅಧಿಸೂಚನೆ ಜಾರಿಗೆ ಬರುವ ಮುನ್ನವೇ ಕಬ್ಬು ಖರೀದಿ ತೆರಿಗೆ ಮತ್ತು ರಸ್ತೆ ಕರ ಮೊತ್ತವನ್ನು ಪಾವತಿಸಿದ್ದ ಕಾರಣ, ಈ ಅಧಿಸೂಚನೆಯಲ್ಲಿ ನೀಡಿರುವ ವಿನಾಯಿತಿಗಳನ್ನು ಸದರಿ ಕಾರ್ಖಾನೆಗಳಿಗೆ ಪೂರ್ವಾನ್ವಯವಾಗಿ ವಿಸ್ತರಿಸಬೇಕಾಗಿರುತ್ತದೆ. ಆದರೆ, ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ, 1957ರ ಅಡಿಯಲ್ಲಿ ಸದರಿ ವಿನಾಯಿತಿಗೆ ಅವಕಾಶವಿಲ್ಲದಿರುವುದರಿಂದ, ಸದರಿ ಕಾರ್ಖಾನೆಗಳು ದಿನಾಂಕ: 01/04/2013ರಿಂದ ದಿನಾಂಕ: 21/11/2013ರವರೆಗೆ ಪಾವತಿಸಿರುವ ಕಬ್ಬು ಖರೀದಿ ತೆರಿಗೆ ಹಾಗೂ ರಸ್ತೆ ಕರವನ್ನು ಮರುಪಾವತಿ ಮಾಡಬೇಕಾಗಿದ್ದು, ಅದನ್ನು 2016–17ನೇ ಸಾಲಿನ ಪೂರಕ ಅಂದಾಜು–1ರಲ್ಲಿ ಅನುದಾನವನ್ನು ನೀಡುವ ಮೂಲಕ ಮಂಜೂರು ಮಾಡಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಆಇ 216 ಸಿಎಸ್‌ಎಲ್ 2013, ಬೆಂಗಳೂರು, ದಿನಾಂಕ: 10/08/2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕೆಳಗೆ ನಮೂದಿಸಿರುವ ಎಂಟು ಸಕ್ಕರೆ ಕಾರ್ಖಾನೆಗಳು ದಿನಾಂಕ:01/04/2013ರಿಂದ ದಿನಾಂಕ: 21/11/2013ರವರೆಗೆ ಪಾವತಿಸಿರುವ ಕಬ್ಬು ಖರೀದಿ ತೆರಿಗೆ ಹಾಗೂ ರಸ್ತೆ ಕರವನ್ನು ಮರುಪಾವತಿ ಮಾಡಲು ₹.747.74 ಲಕ್ಷಗಳನ್ನು (ಏಳು ನೂರ ನಲವ್ತೇಳು ಲಕ್ಷದ ಎಪ್ಪತ್ನಾಲಕ್ಕೂ ಸಾವಿರ ರೂಪಾಯಿಗಳು ಮಾತ್ರ) ಅನುದಾನ ರೂಪದಲ್ಲಿ ನೀಡಿ ಲೆಕ್ಕ ಹೊಂದಾಣಿಕೆ ಮಾಡುವ ಮೂಲಕ ವೆಚ್ಚ ಲೆಕ್ಕ ಶೀರ್ಷಿಕೆ "2040–00–101–0–10 Waiver of cane Purchase Tax and Road Cess"- 100- Financial Assistance/Relief " ಅಡಿ ಒದಗಿಸಿ ಖರ್ಚು ಹಾಕಿ ಅದರಂತೆಯೇ ಪ್ರತಿಯಾಗಿ ರಾಜಸ್ವ ಲೆಕ್ಕ ಶೀರ್ಷಿಕೆ "0040–00–110–1–08 Waiver of cane Purchase Tax and Road Cess" ಅಡಿ ಜಮೆಗೆ ತೆಗೆದುಕೊಂಡು, ಸದರಿ ಕಾರ್ಖಾನೆಗಳು ದಿ: 01.04.2013ರಿಂದ 21.11.2013ರವರೆಗೆ ಪಾವತಿಸಿರುವ ಕಬ್ಬು ಖರೀದಿ ತೆರಿಗೆ ಹಾಗೂ ರಸ್ತೆ ಕರವನ್ನು ಮರುಪಾವತಿ ಮಾಡಲು ಆದೇಶಸಿದೆ.

ದಿನಾಂಕ: 01.04.2013ರಿಂದ 21.11.2013ರವರೆಗೆ ಪಾವತಿಸಿರುವ ಮರುಪಾವತಿಗೆ ಅರ್ಹರಿರುವ ಕಾರ್ಖಾನೆಗಳ ಕಬ್ಬು ಖರೀದಿ ತೆರಿಗೆ, ರಸ್ತೆ ಕರ

₹. ಲಕ್ಷಗಳಲ್ಲಿ

| ಕ್ರಮ ಸಂಖ್ಯೆ | ಸಕ್ಕರೆ ಕಾರ್ಖಾನೆ ಹೆಸರು | ಕಬ್ಬು ಖರೀದಿ ತೆರಿಗೆ | ರಸ್ತೆಕರ | ಮರುಪಾವತಿಗೆ ಅರ್ಹವಿರುವ ಒಟ್ಟು ಮೊತ್ತ |
|---|---|---|---|---|
| 1 | ಬನ್ನಾರಿ ಅಮ್ಮನ್ ಶುಗರ್ಸ್, ನಂಜನಗೂಡು | 286.96 | 49.11 | 336.07 |
| 2 | ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆ ನಿಯಮಿತ, ಪಾಂಡವಪುರ | 36.39 | 6.06 | 42.45 |
| 3 | ಕೋರಮಂಡಲ್ ಶುಗರ್ಸ್ | 102.08 | 17.01 | 119.09 |
| 4 | ಶ್ಯಾಮನೂರು ಶುಗರ್ಸ್ | 24.13 | 4.02 | 28.15 |
| 5 | ಚಾಮುಂಡೇಶ್ವರಿ ಶುಗರ್ಸ್ ಕೆ.ಎಂ. ದೊಡ್ಡಿ | 66.35 | 11.05 | 77.40 |

| ಕ್ರಮ ಸಂಖ್ಯೆ | ಸಕ್ಕರೆ ಕಾರ್ಖಾನೆ ಹೆಸರು | ಕಬ್ಬು ಖರೀದಿ ತೆರಿಗೆ | ರಸ್ತೆಕರ | ಮರುಪಾವತಿಗೆ ಅರ್ಹವಿರುವ ಒಟ್ಟು ಮೊತ್ತ |
|---|---|---|---|---|
| 6 | ಚಾಮುಂಡೇಶ್ವರಿ ಶುಗರ್ಸ್ (ಹೇಮಾವತಿ ಸಸಕಾನಿ) | 32.69 | 5.45 | 38.14 |
| 7 | ಎನ್.ಎಸ್.ಎಲ್.ಶುಗರ್ಸ್ , ಕೊಪ್ಪ | 90.92 | 15.15 | 106.07 |
| 8 | ಎನ್.ಎಸ್.ಎಲ್. ಶುಗರ್ಸ್, ತುಂಗಭದ್ರ | 0.00 | 0.37 | 0.37 |
| | **ಒಟ್ಟು** | **639.52** | **108.22** | **747.74** |

**PR. 549**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಪದ್ಮಾವತಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ.(ವಾ.ತೆ–1)

## ತೋಟಗಾರಿಕೆ ಸಚಿವಾಲಯ

**ವಿಷಯ :** ನಬಾರ್ಡ್ ಸಾಲದ ಅಡಿ ವೈಜ್ಞಾನಿಕ ಉಗ್ರಾಣದ ಮಳಿಗೆಗಳನ್ನು ನಿರ್ಮಿಸಲು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ತೋಟಗಾರಿಕೆ ಇಲಾಖೆಯ ವಿವಿಧ ಕ್ಷೇತ್ರಗಳ ಜಮೀನನ್ನು ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂ:ಸಇ:65:ರಾಉನಿ:2014, ದಿನಾಂಕ:07–02–2015.
2) ಸರ್ಕಾರದ ಆದೇಶ ಸಂ:ಸಇ:65:ರಾಉನಿ:2014(ಭಾ), ದಿನಾಂಕ: 30–04–2016.
3) ಸರ್ಕಾರದ ಆದೇಶ ಸಂ:ಆರ್‌ಡಿ:64:ಎಲ್‌ಜಿಎಲ್:2015, ದಿನಾಂಕ: 25–05–2016.
4) ತೋಟಗಾರಿಕೆ ನಿರ್ದೇಶಕರ ಪತ್ರ ಸಂ:ಇಡಿಕೆಎಸ್:ಕೆಎಸ್‌ಹೆಚ್‌ಡಿ:ಎ:ಎಡಿಹೆಚ್,2:02:2014–15, ದಿನಾಂಕ: 20–04–2015 ಹಾಗೂ 16–06–2015.
5) ತೋಟಗಾರಿಕೆ ನಿರ್ದೇಶಕರ ಪತ್ರ ಸಂ:ಇಡಿಕೆಎಸ್:ಕೆ.ಎಸ್‌ಹೆಚ್‌ಡಿಎ:ಎಡಿಹೆಚ್.2: 02.2014–15, ದಿ: 15–06–2016.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ 1ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರದ ಉಗ್ರಾಣ ನಿಗಮವು ಕೃಷಿ/ತೋಟಗಾರಿಕೆ / ರೇಷ್ಮೆ ಹಾಗೂ ಕೃಷಿ ವಿಶ್ವವಿದ್ಯಾಲಯ ಫಾರಂಗಳಲ್ಲಿ 639 ಎಕರೆ ಜಮೀನನ್ನು 30 ವರ್ಷಗಳ ಅವಧಿಗೆ ಲೀಸ್ ಆಧಾರದ ಮೇಲೆ ಪಡೆದು ವೈಜ್ಞಾನಿಕ ಉಗ್ರಾಣ ಮಳಿಗೆಗಳನ್ನು ನಿರ್ಮಿಸಲು ನಬಾರ್ಡ್ ಸಂಸ್ಥೆಯಿಂದ ₹. 65.00 ಕೋಟಿಗಳನ್ನು ಸರ್ಕಾರದ ನಿರ್ಬಂಧವಿಲ್ಲದ ಖಾತರಿ ಆಧಾರದ ಮೇಲೆ ಸಾಲ ಪಡೆಯಲು ಮಂಜೂರಾತಿ ನೀಡಿದೆ.

ಕ್ರಮ ಸಂಖ್ಯೆ (2) ಸರ್ಕಾರಿ ಆದೇಶದಲ್ಲಿ ತೋಟಗಾರಿಕೆ ಇಲಾಖೆಯ 38 ಎಕರೆ ಜಮೀನನ್ನು ಉಗ್ರಾಣಗಳನ್ನು ನಿರ್ಮಿಸುವ ಉದ್ದೇಶಕ್ಕಾಗಿ 30 ವರ್ಷಗಳ ಅವಧಿಗೆ ಮುಫತ್ತಾಗಿ ಲೀಸ್ ಆಧಾರದ ಮೇಲೆ ಪಡೆಯಲು ಅನುಮೋದನೆ ನೀಡಲಾಗಿದೆ. ಕ್ರಮ ಸಂಖ್ಯೆ 3 ರ ಆದೇಶದಲ್ಲಿ ತೋಟಗಾರಿಕೆ ಇಲಾಖೆಯ 38 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ 30 ವರ್ಷಗಳ ಅವಧಿಗೆ ಮುಫತ್ತಾಗಿ (free lease) ಲೀಸ್ ಆಧಾರದ ಮೇಲೆ ಹಸ್ತಾಂತರಿಸಲು ಕಂದಾಯ ಇಲಾಖೆಯು ಆದೇಶಿಸಿದೆ.

ಕ್ರಮ ಸಂಖ್ಯೆ 4ರ ತೋಟಗಾರಿಕೆ ನಿರ್ದೇಶಕರ ಪತ್ರದಲ್ಲಿ ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಉಗ್ರಾಣ ಮಳಿಗೆ /ಶೀತಲ ಗೃಹಗಳನ್ನು ನಿರ್ಮಿಸಲು ತೋಟಗಾರಿಕೆ ಇಲಾಖೆಯ ವಿವಿಧ 7 ತೋಟಗಾರಿಕೆ ಕ್ಷೇತ್ರಗಳಲ್ಲಿ ಒಟ್ಟು 38 ಎಕರೆ ಜಮೀನನ್ನು ಗುತ್ತಿಗೆ/ಬಾಡಿಗೆ ಆಧಾರದ ಮೇಲೆ ನೀಡಲು ವಿಧಿಸಬಹುದಾದ ಷರತ್ತು ಮತ್ತು ನಿಬಂಧನೆಗಳನ್ನು ಪ್ರಸ್ತಾಪಿಸಲಾಗಿದೆ. ಹಾಗೂ ದಿನಾಂಕ: 16–06–2015ರ ಪತ್ರದಲ್ಲಿ ದಿನಾಂಕ: 08–05–2015 ರಂದು ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ 14ನೇ ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ಪ್ರಸ್ತಾವನೆಯನ್ನು ಮಂಡಿಸಿ ಸ್ಥಿರೀಕರಣ ಅನುಮತಿಯನ್ನು ಪಡೆಯಲಾಗಿದೆ ಎಂದು ತೋಟಗಾರಿಕೆ ನಿರ್ದೇಶಕರು ತಿಳಿಸಿರುತ್ತಾರೆ.

ಕ್ರಮ ಸಂಖ್ಯೆ 5ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಆದೇಶ ಸಂಖ್ಯೆ:ಸಇ:65:ರಾಉನಿ:2014(ಭಾ), ದಿನಾಂಕ: 30.04.2016ರ ಆದೇಶದಲ್ಲಿ ತೋಟಗಾರಿಕೆ ಇಲಾಖೆಗೆ ಸಂಬಂಧಿಸಿದಂತೆ ಹಂಚಿಕೆಯಾಗಿರುವ 38 ಎಕರೆ ಜಮೀನಿನಲ್ಲಿ ತೋಟರಣಗಲ್ಲು ತೋಟಗಾರಿಕೆ ಕ್ಷೇತ್ರ ಸೊಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ ಸಂಬಂಧಿಸಿದ 10 ಎಕರೆ ಜಮೀನು ಕಾಯ್ದಿಟ್ಟ ಅರಣ್ಯ ಪ್ರದೇಶವಾಗಿರುತ್ತದೆ ಎಂಬ ಮಾಹಿತಿಯನ್ನು ಸರ್ಕಾರದ ಗಮನಕ್ಕೆ ಮಂಡಿಸುತ್ತಾ, ತೋಟಗಾರಿಕೆ ಇಲಾಖೆಗೆ ಸಂಬಂಧಿಸಿದಂತೆ 28ಎಕರೆ ಜಮೀನನ್ನು ವೈಜ್ಞಾನಿಕ ಉಗ್ರಾಣ ಮಳಿಗೆಗಳನ್ನು ನಿರ್ಮಿಸಲು 30 ವರ್ಷಗಳ ಅವಧಿಗೆ ಮುಫತ್ತಾಗಿ ಲೀಸ್ ಆಧಾರದ ಮೇಲೆ ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಹಸ್ತಾಂತರಿಸಲು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ ಆದೇಶ ಹೊರಡಿಸಲು ಕೋರಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ತೋಇ 523 ತೋಇವಿ 2016, ಬೆಂಗಳೂರು, ದಿನಾಂಕ: 03–08–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ರಾಜ್ಯ ಉಗ್ರಾಣ ನಿಗಮದ ವತಿಯಿಂದ ವೈಜ್ಞಾನಿಕ ಉಗ್ರಾಣ ಮಳಿಗೆಗಳನ್ನು ನಿರ್ಮಿಸಲು ಈ ಕೆಳಕಂಡಂತೆ ತೋಟಗಾರಿಕೆ ಇಲಾಖೆಯ ವಿವಿಧ ತೋಟಗಾರಿಕೆ ಕ್ಷೇತ್ರಗಳಲ್ಲಿನ ಒಟ್ಟು 28 ಎಕರೆ ಜಮೀನನ್ನು ಕೆಳಕಾಣಿಸಿರುವ ಷರತ್ತುಗಳನ್ನು ವಿಧಿಸಿ ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಜಮೀನು ಹಸ್ತಾಂತರಿಸಲು ಆದೇಶಿಸಿದೆ.

| ಕ್ರ. ಸಂ. | ಜಿಲ್ಲೆ | ಕ್ರ. ಸಂ. | ತಾಲ್ಲೂಕು | ಫಾರಂನ ಹೆಸರು/ತೋಟಗಾರಿಕೆ ಕ್ಷೇತ್ರದ ಹೆಸರು | ತೋಟಗಾರಿಕೆ ಇಲಾಖೆಯಿಂದ ಹಸ್ತಾಂತರಿಸಲಾಗುವ ಜಮೀನು (ಎಕರೆಗಳಲ್ಲಿ) |
|---|---|---|---|---|---|
| 1 | ದಾವಣಗೆರೆ | 1 | ಜಗಳೂರು | ವ್ಯಾಸಗೊಂಡನಹಳ್ಳಿ ತೋಟಗಾರಿಕೆ ಫಾರಂ (ಸರ್ವೆ ನಂ.26) | 3.00 |
| 2 | ದಕ್ಷಿಣ ಕನ್ನಡ | 2 | ಮೂಡಬಿದ್ರೆ | ನ್ಯಾಯಬಸದಿ ತೋಟಗಾರಿಕೆ ಫಾರಂ (ಸರ್ವೆ ನಂ.21/1P11,185/3P2, 10/1 AP6, 193/1CP2 | 5.00 |
| | | 3 | ಬಂಟ್ವಾಳ | ತರಕಾರಿ ಬೀಜೋತ್ಪಾದನಾ ಕೇಂದ್ರ, ತುಂಬೆ, (ಸರ್ವೆ ನಂ.19/2D, 17/1, 17/7 A5, 19/4) | 2.00 |
| 3 | ಮಂಡ್ಯ | 4 | ಮಳವಳ್ಳಿ | ಪೂರಿಗಾಲಿ ತೋಟಗಾರಿಕೆ ಫಾರಂ (ಸರ್ವೆ ನಂ.710) | 10.00 |
| 4 | ಹಾಸನ | 5 | ಆಲೂರು | ಆಲೂರು ತೋಟಗಾರಿಕೆ ಫಾರಂ (ಸರ್ವೆ ನಂ. 92P2) | 3.00 |
| | | 6 | ಹೊಳೆನರಸೀಪುರ | ಗುಂಜೇವು ತೋಟಗಾರಿಕೆ ಫಾರಂ (ಸರ್ವೆ ನಂ.1) | 5.00 |

**ಷರತ್ತು ಮತ್ತು ನಿಬಂಧನೆಗಳು**

1. ಉಗ್ರಾಣ ಮಳಿಗೆ/ಶೀಥಲ ಗೃಹಗಳನ್ನು ನಿರ್ಮಿಸಲು ನೀಡುವ ಕ್ಷೇತ್ರಗಳ ಜಮೀನಿನ ಮಾಲಿಕತ್ವ ತೋಟಗಾರಿಕೆ ಇಲಾಖೆ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ ಅಧೀನದಲ್ಲಿಯೇ ಮುಂದುವರೆಯುತ್ತದೆ.
2. ಸದರಿ ಜಮೀನನ್ನು ಉಗ್ರಾಣ ಮಳಿಗೆ/ಶೀಥಲ ಗೃಹಗಳನ್ನು ನಿರ್ಮಿಸಲು ಮಾತ್ರ ಉಪಯೋಗಿಸುವುದು, ಇದಲ್ಲದೆ ಬೇರೆ ಇನ್ನಾವುದೇ ಚಟುವಟಿಕೆಗಳಿಗೆ ಉಪಯೋಗಿಸಬಾರದು. ಬೇರೆ ಚಟುವಟಿಕೆಗಳಿಗೆ ಉಪಯೋಗಿಸುವುದು ಕಂಡುಬಂದಲ್ಲಿ, ಜಮೀನನ್ನು ತೋಟಗಾರಿಕೆ ಇಲಾಖೆಗೆ ವಾಪಸ್ಸು ಪಡೆಯಲಾಗುವುದು.
3. ಸದರಿ ಕ್ಷೇತ್ರಗಳ ಜಮೀನಿನಲ್ಲಿರುವ ಸಸ್ಯ ಸಂಪತ್ತು ಹಾಗೂ ಮೂಲಭೂತ ಸೌಕರ್ಯಗಳು ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ ಆಸ್ತಿಯಾಗಿದ್ದು, ಇವುಗಳನ್ನು ಯಾವುದೇ ಕಾರಣಕ್ಕೂ ನಾಶ ಮಾಡಬಾರದಾಗಿಯೂ ಹಾಗೂ ಸಸ್ಯ ಸಂಪತ್ತಿನಿಂದ ಬರುವ ಆದಾಯವು ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯಾದಾಗಿರುತ್ತದೆ.
4. ಉಗ್ರಾಣ ಮಳಿಗೆ/ಶೀಥಲ ಗೃಹಗಳನ್ನು ನಿರ್ಮಿಸಲು ಗುರುತಿಸಿರುವ ಭೂಮಿಯನ್ನು ನಕ್ಷೆಯಲ್ಲಿ ಗುರುತಿಸಿ, ಸದರಿ ನಕ್ಷೆಗೆ ನಿರ್ದೇಶನಾಲಯದಿಂದ ಅನುಮೋದನೆ ಪಡೆದ ನಂತರ ಹಸ್ತಾಂತರಿಸುವುದು.
5. ಸದರಿ ಜಮೀನಿನಲ್ಲಿ ಕೊಳವೆ ಬಾವಿ, ಪೈಪ್ ಲೈನ್ ಅಥವಾ ಇತರೆ ಮೂಲಭೂತ ಸೌಕರ್ಯಗಳಿದ್ದಲ್ಲಿ, ಅವುಗಳ ಬದಲಿಗೆ ಹೊಸ ಕೊಳವೆ ಬಾವಿ, ಪೈಪ್ ಲೈನ್ ಅಥವಾ ಇತರೆ ಮೂಲಭೂತ ಸೌಕರ್ಯಗಳನ್ನು ಅಳವಡಿಸಿಕೊಡುವುದು.
6. ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯು ಕಾಲಕಾಲಕ್ಕೆ ಕೈಗೊಳ್ಳುವ ಯಾವುದೇ ನಿರ್ಣಯ/ನಿಯಮಗಳಿಗೆ ಬದ್ಧರಾಗಿರುವುದು.
7. ಈ ಜಮೀನನ್ನು ಉಗ್ರಾಣ ಮಳಿಗೆಗಳನ್ನು ನಿರ್ಮಿಸುವ ಉದ್ದೇಶಕ್ಕಾಗಿ ಮಾತ್ರ ಬಳಸಿಕೊಳ್ಳತಕ್ಕದ್ದು.
8. ಜಮೀನಿನ ಯಾವುದೇ ಭಾಗವನ್ನು ಬೇರೊಬ್ಬರಿಗೆ ಗುತ್ತಿಗೆ ಅಥವಾ ಉಪ ಗುತ್ತಿಗೆ ಆಧಾರದ ಮೇಲೆ ನೀಡತಕ್ಕದ್ದಲ್ಲ ಹಾಗೂ ಸದರಿ ಜಮೀನನ್ನು ಮಾರಾಟ ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR. 550**

**SC. 20**

**ಆರ್. ರಾಮಕೃಷ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ನಾರಾಯಣ ಹೃದಯಾಲಯ ಪ್ರೈ.ಲಿ. ಬೊಮ್ಮಸಂದ್ರ, ಬೆಂಗಳೂರು ಈ ಆಸ್ಪತ್ರೆಯಲ್ಲಿ ಮಾನವ ಅಂಗಾಂಗಗಳ ಮತ್ತು ಅಂಗಾಂಶಗಳ ಕಸಿ ಜೋಡಣೆಗಾಗಿ ಹೆಚ್ಚುವರಿ ಅಧಿಕಾರಿಯುಕ್ತ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :** 1) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯ ಭಾರತ ಸರ್ಕಾರ ನವದೆಹಲಿ ಇವರ ಅಧಿಸೂಚನೆ ಸಂಖ್ಯೆ: ಜಿ.ಎಸ್.ಆರ್/218(ಇ), ದಿನಾಂಕ: 27-3-2014.

2) ಸರ್ಕಾರದ ಆದೇಶ ಸಂಖ್ಯೆ ಆಕುಕ 26 ಎಫ್‌ಪಿಆರ್ 2012, ದಿನಾಂಕ: 01-06-2012.

3) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಬೆಂಗಳೂರು ಇವರ ಪತ್ರ ಸಂಖ್ಯೆ:ಜಂನಿ(ವೈ)ಮಾ.ಅ.ಕ.ಜೊ/10/2014-15, ದಿನಾಂಕ: 15-6-2015 ಮತ್ತು 11-5-2016.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ರಲ್ಲಿ ಕೇಂದ್ರ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯ ಭಾರತ ಸರ್ಕಾರ, ನವದೆಹಲಿ ಇವರ ಅಧಿಸೂಚನೆಯ ಮೇರೆಗೆ ಸಚಿವಾಲಯವು ಪ್ರಕಟಿಸಿರುವ Transplantation of Human Organs & Tissue rules 2014ರ ನಿಯಮ 11(4) ಹಾಗೂ ನಿಯಮ 12 ರಲ್ಲಿ ಅಗತ್ಯ ಪಡಿಸಿರುವಂತೆ ನಾರಾಯಣ ಹೃದಯಾಲಯ ಪ್ರೈ.ಲಿ. ಬೊಮ್ಮಸಂದ್ರ, ಬೆಂಗಳೂರು ಆಸ್ಪತ್ರೆಯಲ್ಲಿ ಮಾನವ ಅಂಗಾಂಗಗಳ ಮತ್ತು ಅಂಗಾಗಗಳ ಕಸಿ ಜೋಡಣೆಗಾಗಿ ಹೆಚ್ಚುವರಿ ಅಧಿಕಾರಿಯುಕ್ತ ಸಮಿತಿಯನ್ನು ಪುನರ್ ರಚಿಸಿ ಕ್ರಮಾಂಕ (2) ರಂದು ಆದೇಶ ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (3)ರ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮಾನವ ಅಂಗಾಂಗಗಳ ಮತ್ತು ಅಂಗಂಗಗಳ ಕಸಿ ಜೋಡಣೆಗಾಗಿ ಈಗಾಗಲೇ ಅಸ್ತಿತ್ವದಲ್ಲಿರುವ ಹೆಚ್ಚುವರಿ ಅಧಿಕಾರಯುಕ್ತ ಸಮಿತಿಯನ್ನು ಪುನರ್ ರಚಿಸುವಂತೆ ಕೋರಿ ಸದಸ್ಯರ ಹೆಸರುಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯಲ್ಲಿ ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 64 ಎಫ್‌ಪಿಆರ್ 2015, ಬೆಂಗಳೂರು, ದಿನಾಂಕ: 29-06-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, Transplantation of Human Organs & Tissue rules 2014ರ ನಿಯಮ 11 (4) ಹಾಗೂ ನಿಯಮ 12ರಲ್ಲಿ ಅಗತ್ಯ ಪಡಿಸಿರುವಂತೆ ಹಾಗೂ ಉಲ್ಲೇಖ(2)ರಲ್ಲಿನ ಪ್ರಸ್ತಾವನೆಯಂತೆ, ನಾರಾಯಣ ಹೃದಯಾಲಯ ಪ್ರೈ.ಲಿ. ಬೊಮ್ಮಸಂದ್ರ, ಬೆಂಗಳೂರು ಆಸ್ಪತ್ರೆಯಲ್ಲಿ ಮಾನವ ಅಂಗಾಂಗಗಳ ಮತ್ತು ಅಂಗಾಂಶಗಳ ಕಸಿ ಜೋಡಣೆಗಾಗಿ ಹೆಚ್ಚುವರಿ ಅಧಿಕಾರಿಯುಕ್ತ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಿ ಆದೇಶಿಸಿದೆ. ಕ್ರಮ ಸಂಖ್ಯೆ 2 ರಿಂದ 5 ರವರೆಗಿನ ನಾಮ ನಿರ್ದೇಶಿತ ಸದಸ್ಯರ ಅವಧಿಯು 2 ವರ್ಷಗಳಿಗೆ ಸೀಮಿತವಾಗಿರುತ್ತದೆ.

| | | |
|---|---|---|
| 1. | ಡಾ॥ ಆಶಾ ನಾಯಕ್<br>ವೈದ್ಯಕೀಯ ನಿರ್ದೇಶಕರು,<br>ನಾರಾಯಣ ಹೃದಯಾಲಯ ಪ್ರೈ.ಲಿ, ಬೊಮ್ಮಸಂದ್ರ, ಬೆಂಗಳೂರು. | ಅಧ್ಯಕ್ಷರು |
| 2 | ಡಾ॥ ಶಿಬುವಾಸುದೇವನ್ ಪಿಳ್ಳೈ, M.B.B.S, MCH<br>ನಾರಾಯಣ ಹೃದಯಾಲಯ ಪ್ರೈ.ಲಿ. ಬೊಮ್ಮಸಂದ್ರ, ಬೆಂಗಳೂರು. | ಸದಸ್ಯರು |
| 3 | ಡಾ॥ ಸುಬ್ರಮಣಿಯನ್ ಕಣ್ಣನ್, M.B.B.S, MD, (Endocrinology)<br>ಎಂಡೋಕ್ರೈನಾಲಜಿ ವಿಭಾಗದ ಮುಖ್ಯಸ್ಥರು, ನಾರಾಯಣ<br>ಹೃದಯಾಲಯ ಪ್ರೈ.ಲಿ. ಬೊಮ್ಮಸಂದ್ರ, ಬೆಂಗಳೂರು. | ಸದಸ್ಯರು |
| 4 | ಮೇಜರ್ ಜನರಲ್(ನಿ) ರತನ್ ಕೌಲ್<br>ವಿಲ್ಲಾ-68/1, ಫೇಸ್-1, ಪಾಮ್ ಮೆಡೋಸ್, ವೈಟ್‌ಫೀಲ್ಡ್,<br>ಬೆಂಗಳೂರು-560066. | ಸದಸ್ಯರು |
| 5 | ಡಾ॥ ಬೆವಿನ್ ಜೆ ಪ್ರಭಾ ಕುಮಾರಿ ಜೈರಾಜ್,<br>ನೋ.1857 & 1857 20ನೇ ಮುಖ್ಯ ರಸ್ತೆ, ಹೆಚ್.ಎಸ್.ಆರ್. ಸೆಕ್ಟರ್-1,<br>ಬೆಂಗಳೂರು-560102. | ಸದಸ್ಯರು |
| 6 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು, ಅಥವಾ<br>ಇವರನ್ನು ಪ್ರತಿನಿಧಿಸುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ<br>ಸೇರಿದ ಜಂಟಿ ನಿರ್ದೇಶಕರ ಹುದ್ದೆಗಿಂತ ಕಡಿಮೆ ದರ್ಜೆಯಲ್ಲಿರದ ನಾಮ<br>ನಿರ್ದೇಶಿತ ಒಬ್ಬ ಅಧಿಕಾರಿ. | ಸದಸ್ಯರು |
| 7 | ನಿರ್ದೇಶಕರು,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು, ಅಥವಾ<br>ಇವರನ್ನು ಪ್ರತಿನಿಧಿಸುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ<br>ಸೇರಿದ ಉಪ ನಿರ್ದೇಶಕರ ಹುದ್ದೆಗಿಂತ ಕಡಿಮೆ ದರ್ಜೆಯಲ್ಲಿರದ ನಾಮ<br>ನಿರ್ದೇಶಿತ ಒಬ್ಬ ಅಧಿಕಾರಿ. | ಸದಸ್ಯರು |

**PR. 551**

**SC. 100**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ. ಶ್ರೀನಿವಾಸಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ರಾಜ್ಯ ಪಿ.ಸಿ & ಪಿ.ಎನ್.ಡಿ.ಟಿ ಕೋಶದ ರಾಜ್ಯ ಸಕ್ಷಮ ಪ್ರಾಧಿಕಾರ ಹಾಗೂ ಮಲ್ಟಿ ಮೆಂಬರ್ ಬಾಡಿಯಲ್ಲಿ ಒಬ್ಬ ಸರ್ಕಾರೇತರ ಮಹಿಳಾ ಪ್ರತಿನಿಧಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಅಧಿಸೂಚನೆ ಸಂಖ್ಯೆ:ಆಕುಕ/133/ಎಫ್‌ಪಿಎಸ್ 2006, ದಿನಾಂಕ: 10–4–2008 ಮತ್ತು 15–10–2008.
2) ಸರ್ಕಾರದ ಆದೇಶ ಸಂಖ್ಯೆ:ಆಕುಕ 19 ಎಫ್‌ಪಿಇ 2009, ದಿನಾಂಕ: 30–6–2009.
3) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ರವರ ಪತ್ರ ಸಂಖ್ಯೆ: ಡಿಡಿ/ಪಿಸಿ & ಪಿಎನ್‌ಡಿಟಿ/10/2013–14, ದಿನಾಂಕ:16–1–2016.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ: 10–4–2008 ಮತ್ತು 15–10–2008ರ ಅಧಿಸೂಚನೆಯಲ್ಲಿ ಪಿಸಿ & ಪಿಎನ್‌ಡಿಟಿ ಕಾಯ್ದೆ, 1994 ರಡಿಯಲ್ಲಿ ರಾಜ್ಯದಲ್ಲಿ ಪ್ರತಿ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳನ್ನು ಜಿಲ್ಲಾ ಸಕ್ಷಮ ಪ್ರಾಧಿಕಾರಿಯಾಗಿ ನಾಮ ನಿರ್ದೇಶನ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರಲ್ಲಿ ಪಿಸಿ & ಪಿಎನ್‌ಡಿಟಿ ಕಾಯ್ದೆ, 1994ರ ಅಡಿಯಲ್ಲಿ ಕೇಂದ್ರ ಸರ್ಕಾರವು ನೀಡಿರುವ ಮಾರ್ಗಸೂಚಿಗಳನ್ವಯ ಕೆಳಕಂಡ ಸದಸ್ಯರುಗಳನ್ನು ಒಳಗೊಂಡ ಮಲ್ಟಿ ಮೆಂಬರ್ ಬಾಡಿಯನ್ನು ರಾಜ್ಯ ಸಕ್ಷಮ ಪ್ರಾಧಿಕಾರಿಯಾಗಿ ರಾಜ್ಯ ಸರ್ಕಾರ ನಾಮ ನಿರ್ದೇಶಿಸಿ ನೇಮಿಸಿ ಆದೇಶ ಹೊರಡಿಸಲಾಗಿರುತ್ತದೆ.

| | | |
|---|---|---|
| 1 | ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್) | ಅಧ್ಯಕ್ಷರು |
| 2 | ಸರ್ಕಾರೇತರ ಸಂಸ್ಥೆಯ ಮಹಿಳಾ ಪ್ರತಿನಿಧಿ (ಸರ್ಕಾರದಿಂದ ಪ್ರತ್ಯೇಕವಾಗಿ ನಾಮ ನಿರ್ದೇಶನ ಮಾಡಲ್ಪಡುವ) | ಸದಸ್ಯರು |
| 3 | ಸರ್ಕಾರದ ಕಾರ್ಯದರ್ಶಿ<br>ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಇಲಾಖೆ ಅಥವಾ ಸರ್ಕಾರದ ಜಂಟಿ ಕಾರ್ಯದರ್ಶಿ ರವರಿಗಿಂತ ಕಡಿಮೆ ದರ್ಜೆ ಇಲ್ಲದ ಅವರ ಪ್ರತಿನಿಧಿ | ಸದಸ್ಯರು |

ಮೇಲೆ ಓದಲಾದ ಕ್ರಮಾಂಕ (3)ರ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ರವರು ರಾಜ್ಯ ಪಿಸಿ & ಪಿಎನ್‌ಡಿಟಿ ಕೋಶದ ರಾಜ್ಯ ಸಕ್ಷಮ ಪ್ರಾಧಿಕಾರ ಹಾಗೂ ಮಲ್ಟಿ ಮೆಂಬರ್ ಬಾಡಿ ಪತ್ರದಲ್ಲಿ ಶ್ರೀಮತಿ ಕೆ.ಎಸ್.ವಿಮಲ ರವರನ್ನು ಸರ್ಕಾರೇತರ ಮಹಿಳಾ ಪ್ರತಿನಿಧಿಯಾಗಿ ಆಯ್ಕೆ ಮಾಡಲಾಗಿದ್ದು, ಸದರಿ ಸದಸ್ಯರ ಮೂರು ವರ್ಷಗಳ ಅವಧಿಯು ಅಂತ್ಯಗೊಂಡಿರುತ್ತದೆ ಎಂದು ತಿಳಿಸುತ್ತಾ ಪಿಸಿ & ಪಿಎನ್‌ಡಿ.ಟಿ ಕಾಯ್ದೆ, 1994 ರನ್ವಯ 17(3)(ಎ)(ii) ರಂತೆ ನಿಯಮಾನುಸಾರ ರಾಜ್ಯ ಸಕ್ಷಮ ಪ್ರಾಧಿಕಾರ ಹಾಗೂ ಮಲ್ಟಿ ಮೆಂಬರ್ ಬಾಡಿಯಲ್ಲಿ ಸರ್ಕಾರೇತರ ಮಹಿಳಾ ಪ್ರತಿನಿಧಿಯನ್ನು ಆಯ್ಕೆ ಮಾಡಲು 8 ಜನ ಮಹಿಳಾ ಪ್ರತಿನಿಧಿಗಳ ವಿವರ ಸಲ್ಲಿಸಿದ್ದು, ಅವರುಗಳು :–

1 ಶ್ರೀಮತಿ ಸರಸು ಎಸ್ತರ್ ಥಾಮಸ್

2 ಡಾ:ಜ್ಯೋತಿಕ ಎ. ದೇಸಾಯಿ

3 ಶ್ರೀಮತಿ ಸುಮನಾ ಬಾಳಿಗ.ಎಂ

4 ಶ್ರೀಮತಿ ವಿಮಲಾ ಕೆ.ಎಸ್

5 ಶ್ರೀಮತಿ ಗೀತಾ ಮೆನನ್

6 ಶ್ರೀಮತಿ ರೇಣುಕಾಮುಂಕುದ್

7 ಶ್ರೀಮತಿ ಮಧುರ ಅಶೋಕ್

8 ಡಾ:ಪದ್ಮಿನಿ ಪ್ರಸಾದ್

ಮೇಲ್ಕಂಡ ಮಹಿಳಾ ಪ್ರತಿನಿಧಿಗಳಲ್ಲಿ ಶ್ರೀಮತಿ ಸುಮನಾ ಬಾಳಿಗ ಎಂ. ರವರು ಈಗಾಗಲೇ ಪಿ.ಸಿ. & ಪಿ.ಎನ್.ಡಿ.ಟಿಯ ರಾಜ್ಯ ಸಲಹಾ ಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿರುತ್ತಾರೆ. ಶ್ರೀಮತಿ ವಿಮಲ ಕೆ.ಎಸ್ ರವರು ಎರಡನೇ ಬಾರಿ ರಾಜ್ಯ ಸಕ್ಷಮ ಪ್ರಾಧಿಕಾರಿ ಹಾಗೂ ಮಲ್ಟಿ ಮೆಂಬರ್ ಬಾಡಿಯ ಮಹಿಳಾ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸಿರುತ್ತಾರೆ. ಶ್ರೀಮತಿ ಗೀತಾ ಮೆನನ್ ಇವರು ರಾಜ್ಯ ಸಲಹಾ ಮಂಡಳಿಯ ಸದಸ್ಯರಾಗಿ ಕಾರ್ಯನಿರ್ವಹಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸದರಿ 3 ಜನ ಸದಸ್ಯರನ್ನು ಹೊರತುಪಡಿಸಿ ಉಳಿದ ಕ್ರಸಂ 1,2 ಮತ್ತು 6 ರಿಂದ 8 ರಲ್ಲಿರುವ 5 ಜನ ಮಹಿಳಾ ಪ್ರತಿನಿಧಿಗಳಲ್ಲಿ ಒಬ್ಬರನ್ನು ರಾಜ್ಯ ಪಿಸಿ & ಪಿಎನ್‌ಡಿಟಿ ಕೋಶದ ರಾಜ್ಯ ಸಕ್ಷಮ ಪ್ರಾಧಿಕಾರ ಹಾಗೂ ಮಲ್ಟಿ ಮೆಂಬರ್ ಬಾಡಿಯ ಸದಸ್ಯರಾಗಿ ನೇಮಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 111 ಎಫ್‌ಪಿಇ 2016, ಬೆಂಗಳೂರು, ದಿನಾಂಕ: 13-07-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪಿಸಿ & ಪಿ ಎನ್.ಡಿ.ಟಿ ಕಾಯ್ದೆ 1994 ರನ್ವಯ 17(3)(ಎ)(ii) ರಲ್ಲಿ ಕೇಂದ್ರ ಸರ್ಕಾರವು ನೀಡಿರುವ ಮಾರ್ಗಸೂಚಿಯಂತೆ ರಾಜ್ಯ ಸಕ್ಷಮ ಪ್ರಾಧಿಕಾರ ಹಾಗೂ ಮಲ್ಟಿ ಮೆಂಬರ್ ಬಾಡಿಯಲ್ಲಿ ಡಾ.ಜ್ಯೋತಿಕ ಎ.ದೇಸಾಯಿ, ವಿಶ್ರಾಂತ ಅಧ್ಯಕ್ಷರು, ಬಿ.ಸಿ.ಓ.ಜಿ. ಹಿರಿಯ ತಜ್ಞರು, ಡಾ.ಪಿ.ಆರ್ ದೇಸಾಯಿ ಆಸ್ಪತ್ರೆ, ಬೆಂಗಳೂರು ಇವರನ್ನು ಸರ್ಕಾರೇತರ ಮಹಿಳಾ ಪ್ರತಿನಿಧಿಯಾಗಿ ನೇಮಿಸಿ ಆದೇಶಿಸಲಾಗಿದೆ.

ಈ ಆದೇಶವು, ಸರ್ಕಾರಿ ಆದೇಶ ಸಂಖ್ಯೆ:ಆಕುಕ 19 ಎಫ್‌ಪಿಇ 2009, ದಿನಾಂಕ:30.-06-2009 ರಲ್ಲಿ ನಿಗಧಿಪಡಿಸಿರುವ ಕಾರ್ಯಚಟುವಟಿಕೆಗಳು ಮತ್ತು ನಿಯಮಗಳನ್ನು ಒಳಗೊಂಡಿರುತ್ತದೆ.

**PR. 552**

**SC. 50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ. ಶ್ರೀನಿವಾಸಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಕೊಲಂಬಿಯಾ ಏಷ್ಯಾ ರೆಫರಲ್ ಆಸ್ಪತ್ರೆ, ಯಶವಂತಪುರ, ಮಲ್ಲೇಶ್ವರಂ ಪಶ್ಚಿಮ, ಬೆಂಗಳೂರು-560055 ಆಸ್ಪತ್ರೆಯಲ್ಲಿ ಮಾನವ ಅಂಗಾಂಗಗಳ ಮತ್ತು ಅಂಗಾಂಶಗಳ ಕಸಿ ಜೋಡಣೆಗಾಗಿ ಹೆಚ್ಚುವರಿ ಅಧಿಕಾರಿಯುಕ್ತ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :**

1) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ ಇವರ ಅಧಿಸೂಚನೆ ಸಂಖ್ಯೆ:ಜಿಎಸ್‌ಆರ್/218(ಇ), ದಿನಾಂಕ: 27-03-2014.
2) ಸರ್ಕಾರದ ಆದೇಶ ಸಂಖ್ಯೆ: ಆಕುಕ 85 ಎಫ್‌ಪಿಆರ್ 2014, ದಿನಾಂಕ: 12/06/2014.
3) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರಿಂದ ಬಂದಿರುವ ಏಕ ಕಡತದ ಸಂಖ್ಯೆ: ಜಂನಿ(ವೈ)ಮಾ.ಅ.ಕ.ಜೋ/19/2016-17, ದಿ:07-2019

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ ಇವರ ಅಧಿಸೂಚನೆ ಸಂಖ್ಯೆ:ಜಿಎಸ್‌ಆರ್/218(ಇ), ದಿನಾಂಕ: 27-3-2014 ರಲ್ಲಿ ಮಾನವ ಅಂಗಾಂಗ ಮತ್ತು ಅಂಗಾಂಶ ಕಸಿ ಜೋಡಣೆ ನಿಯಮಗಳು, 1995 ಕ್ಕೆ ಕೆಲವು ತಿದ್ದುಪಡಿಗಳನ್ನು ಮಾಡಿ ಪ್ರಕಟಣೆ ಹೊರಡಿಸಿದೆ. ಅದರಂತೆ ಕೊಲಂಬಿಯಾ ಏಷ್ಯಾ ರೆಫರಲ್ ಆಸ್ಪತ್ರೆ, ಬೆಂಗಳೂರು-560055 ರವರು ಈಗ ಅಸ್ತಿತ್ವದಲ್ಲಿರುವ ಹೆಚ್ಚುವರಿ ಅಧಿಕಾರಯುಕ್ತ ಸಮಿತಿಯನ್ನು ಉಲ್ಲೇಖ(2)ರ ಆದೇಶದಲ್ಲಿ ಪುನರ್ ರಚಿಸಲಾಗಿರುತ್ತದೆ. ಸದರಿ ಸಮಿತಿಯ ಅವಧಿಯು 11-06-2016ಕ್ಕೆ ಅಂತ್ಯಗೊಳ್ಳುತ್ತದೆ.

ಆದುದರಿಂದ, ಉಲ್ಲೇಖ(3)ರ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮಾನವ ಅಂಗಾಂಗಗಳ ಮತ್ತು ಅಂಗಾಂಗಗಳ ಕಸಿ ಜೋಡಣೆಗಾಗಿ ಈಗಾಗಲೇ ಅಸ್ಥಿತ್ವದಲ್ಲಿರುವ ಅಧಿಕಾರಯುಕ್ತ ಸಮಿತಿಯನ್ನು ಪುನರ್ ರಚಿಸಲು ಕೋರಿ ಸದಸ್ಯರ ಹೆಸರು ಮತ್ತು ಹುದ್ದೆಗಳ ವಿವರಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 102 ಎಫ್‌ಪಿಆರ್ 2016, ಬೆಂಗಳೂರು, ದಿನಾಂಕ: 22-07-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಉಲ್ಲೇಖ(1)ರ ಅಧಿಸೂಚನೆಯ ನಿಯಮ 11/4 ಮತ್ತು 12 ರಂತೆ ಹಾಗೂ ಉಲ್ಲೇಖ (2)ರ ಕೋರಿಕೆಯಂತೆ ಕೊಲಂಬಿಯಾ ಏಷ್ಯಾ ರೆಫರಲ್ ಆಸ್ಪತ್ರೆ, ಯಶವಂತಪುರ, ಮಲ್ಲೇಶ್ವರಂ ಪಶ್ಚಿಮ, ಬೆಂಗಳೂರು-560055 ಆಸ್ಪತ್ರೆಯಲ್ಲಿ ಮಾನವ ಅಂಗಾಂಗಗಳ ಮತ್ತು ಅಂಗಾಂಶಗಳ ಕಸಿ ಜೋಡಣೆಗಾಗಿ ಹೆಚ್ಚುವರಿ ಅಧಿಕಾರಿಯುಕ್ತ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಿದೆ. ಕ್ರಮ ಸಂಖ್ಯೆ 2 ರಿಂದ 5 ರವರೆಗಿನ ನಾಮ ನಿರ್ದೇಶಿತ ಸದಸ್ಯರ ಅವಧಿಯು 2 ವರ್ಷಗಳಿಗೆ ಸೀಮಿತವಾಗಿರುತ್ತದೆ.

| | | |
|---|---|---|
| 1 | ಡಾ॥ ಕಂಚನ್ ಸನ್ಯಾಲ್,<br>ವೈದ್ಯಕೀಯ ನಿರ್ದೇಶಕರು, ಕೊಲಂಬಿಯಾ ಏಷ್ಯಾ ರೆಫರಲ್ ಹಾಸ್ಪಿಟಲ್ ಯಶವಂತಪುರ, ಬೆಂಗಳೂರು. | ಅಧ್ಯಕ್ಷರು |
| 2 | ಡಾ॥ ರಾಜನ್ ನರಸಿಂಹ ವಿಕ್ರಮ್,<br>ಮುಖ್ಯಸ್ಥರು, ಔಷಧಿ ವಿಭಾಗ, ಕೊಲಂಬಿಯಾ ಏಷ್ಯಾ ರೆಫರಲ್ ಹಾಸ್ಪಿಟಲ್-ಯಶವಂತಪುರ, ಬೆಂಗಳೂರು. | ಸದಸ್ಯರು |
| 3 | ಡಾ॥ ಗುರುಪ್ರಸಾದ್ ಹೆಚ್.<br>ಮುಖ್ಯಸ್ಥರು, ವೈದ್ಯಕೀಯ ವಿಭಾಗ,<br>ಮೆ: ಕೊಲಂಬಿಯಾ ಏಷ್ಯಾ ರೆಫರಲ್ ಹಾಸ್ಪಿಟಲ್-<br>ಯಂಶವಂತಪುರ, ಬೆಂಗಳೂರು | ಸದಸ್ಯರು |

| | | |
|---|---|---|
| 4 | ಶ್ರೀ ಐ.ಎಸ್. ಅಂಟಿನ್,<br>ನಿವೃತ್ತ ಜಿಲ್ಲಾ ಪ್ರಧಾನ ಸತ್ರ ನ್ಯಾಯಾಧೀಶರು, ಟಸ್ಕರ್ ಟೌನ್,<br>ಬೆಂಗಳೂರು. | ಸದಸ್ಯರು |
| 5 | ಶ್ರೀಮತಿ ಚಿತ್ರ ಟಿ.ವಿ.<br>ತರಬೇತಿಗಾರರು ಮತ್ತು ಸಮಾಲೋಚನಕಾರರು,<br>ಪರಿವರ್ತನ್ ಕೌನ್ಸಿಲಿಂಗ್ ಮತ್ತು ರೀಸರ್ಚ್ ಸೆಂಟರ್, ಬೆಂಗಳೂರು. | ಸದಸ್ಯರು |
| 6 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಅಥವಾ ಇವರನ್ನು ಪ್ರತಿನಿಧಿಸುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಸೇರಿದ ಉಪ ಕಾರ್ಯದರ್ಶಿ/ಜಂಟಿ ನಿರ್ದೇಶಕರ ಹುದ್ದೆಗಿಂತ ಕಡಿಮೆ ದರ್ಜೆಯಲ್ಲಿರದ ನಾಮ ನಿರ್ದೇಶಿತ ಒಬ್ಬ ಅಧಿಕಾರಿ. | ಸದಸ್ಯರು |
| 7 | ನಿರ್ದೇಶಕರು,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಅಥವಾ ಇವರನ್ನು ಪ್ರತಿನಿಧಿಸುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಸೇರಿದ ಉಪ ನಿರ್ದೇಶಕರ ಹುದ್ದೆಗಿಂತ ಕಡಿಮೆ ದರ್ಜೆಯಲ್ಲಿರದ ನಾಮ ನಿರ್ದೇಶಿತ ಒಬ್ಬ ಅಧಿಕಾರಿ. | ಸದಸ್ಯರು |

**PR. 553**
**SC. 100**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ವಿ. ಶ್ರೀನಿವಾಸಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿ., ಬೆಂಗಳೂರು ಇದು ಭಾರತೀಯ ರಿಸರ್ವ್ ಬ್ಯಾಂಕಿನ ಸುತ್ತೋಲೆಗಳನ್ನು ಉಲ್ಲಂಘಿಸಿ ನಾನ್ ಎಸ್.ಎಲ್.ಆರ್, ವ್ಯವಹಾರ ನಡೆಸಿರುವ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 64ರಡಿ ನೇಮಕವಾದ ವಿಚಾರಣಾಧಿಕಾರಿಗಳು ನಡೆಸುವ ವಿಚಾರಣಾ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ:ಸಿಓ 33 ಸಿಎಲ್ಎಂ 2010, ದಿನಾಂಕ:19–08–2011.
2) ಸರ್ಕಾರದ ಆದೇಶ ಸಂಖ್ಯೆ: ಸಿಓ 31 ಸಿಎಲ್ಎಂ 2012, ದಿನಾಂಕ: 17–03–2012.
3) ಸರ್ಕಾರದ ಆದೇಶ ಸಂಖ್ಯೆ:ಸಿಓ 31 ಸಿಎಲ್ಎಂ 2012, ದಿನಾಂಕ:23–09–2014.
4) ಸರ್ಕಾರದ ಆದೇಶ ಸಂಖ್ಯೆ:ಸಿಓ 43 ಸಿಎಲ್ಎಂ 2015, ದಿನಾಂಕ: 23–02–2015.
5) ಸರ್ಕಾರದ ಆದೇಶ ಸಂಖ್ಯೆ:ಸಿಓ 170 ಸಂಮಾಸ 2015, ದಿನಾಂಕ: 10–08–2015.
6) ಸರ್ಕಾರದ ಆದೇಶ ಸಂಖ್ಯೆ:ಸಿಓ 170 ಸಂಮಾಸ 2015, ದಿನಾಂಕ: 08–12–2015.
7) ಸರ್ಕಾರದ ಆದೇಶ ಸಂಖ್ಯೆ:ಸಿಓ 170 ಸಂಮಾಸ 2015, ದಿನಾಂಕ: 27–01–2016.
8) ಸರ್ಕಾರದ ಆದೇಶ ಸಂಖ್ಯೆ:ಸಿಓ 170 ಸಂಮಾಸ 2015, ದಿನಾಂಕ: 12–05–2016.
9) ಸಹಕಾರ ಸಂಘಗಳ ನಿಬಂಧಕರ ಕಛೇರಿ ಪತ್ರ ಸಂಖ್ಯೆ:ಯುಬಿಸಿ1/169/ವಿಚಾರಣೆ/2009–10, ದಿನಾಂಕ:04–07–2016.

**ಪ್ರಸ್ತಾವನೆ:–**

ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿ., ಬೆಂಗಳೂರು ಇದು ಭಾರತೀಯ ರಿಸರ್ವ್ ಬ್ಯಾಂಕಿನ ಸುತ್ತೋಲೆಯನ್ನು ಉಲ್ಲಂಘಿಸಿ ನಾನ್ ಎಸ್.ಎಲ್.ಆರ್. ವ್ಯವಹಾರವನ್ನು ನಡೆಸಿ ಬ್ಯಾಂಕಿಗೆ ಉಂಟು ಮಾಡಿರುವ ನಷ್ಟದ ಪ್ರಮಾಣವನ್ನು ನಿರ್ಧರಿಸಿ ಹಾಗೂ ಬ್ಯಾಂಕಿಗೆ ವಿಧಿಸಿರುವ ₹. 5.00 ಲಕ್ಷಗಳ ದಂಡವನ್ನು ಸಂಬಂಧಪಟ್ಟ ಆಡಳಿತ ಮಂಡಳಿಯ ಸದಸ್ಯರು/ಅಧಿಕಾರಿಗಳಿಂದ ವಸೂಲಿಗೆ ಜವಾಬ್ದಾರಿ ನಿಗಧಿಪಡಿಸುವ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 64ರ ಅಡಿ ವಿಚಾರಣಾಧಿಕಾರಿಗಳನ್ನು ವಿಚಾರಣೆಗೆ ನೇಮಿಸಿ ದಿ:28–08–2009 ರಂದು ಸಹಕಾರ ಸಂಘಗಳ ನಿಬಂಧಕರು ಆದೇಶ ಹೊರಡಿಸಿರುತ್ತಾರೆ. ನಂತರ ವಿಚಾರಣಾ ಅವಧಿಯನ್ನು ಕಾಲ ಕಾಲಕ್ಕೆ ಮೇಲೆ ಓದಲಾದ (1) ರಿಂದ (7) ರವರೆಗಿನ ವಿವಿಧ ದಿನಾಂಕಗಳನ್ನು ಅವಧಿ ವಿಸ್ತರಿಸಿದ್ದು, ಕೊನೆಯದಾಗಿ ಉಲ್ಲೇಖ (8)ರ ಸರ್ಕಾರದ ಆದೇಶದಲ್ಲಿ ದಿನಾಂಕ: 30–06–2016 ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ (9)ರ ದಿನಾಂಕ:04–07–2016ರ ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯಲ್ಲಿ ಪ್ರಸ್ತುತ ವಿಚಾರಣಾಧಿಕಾರಿಯವರು ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರು ತಮ್ಮ ಹುದ್ದೆಯ ಕರ್ತವ್ಯದೊಂದಿಗೆ ಎಂಎಸ್‌ಐಎಲ್ ಚಿಟ್ಸ್ ಉಸ್ತುವಾರಿಯ ಪ್ರಭಾರ, ಸಹಕಾರ ಚುನಾವಣಾ ಪ್ರಾಧಿಕಾರದ ಕಾರ್ಯದರ್ಶಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವುದಾಗಿ ಇದಲ್ಲದೇ ಗೌರವ ಉಚ್ಛ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ 12204/2016 ರಲ್ಲಿನ ಆದೇಶದಂತೆ ಶ್ರೀ ಮಧುಸೂಧನ್, ಬ್ಯಾಂಕಿನ ನಿವೃತ್ತ ಉಪ ಪ್ರಧಾನ ವ್ಯವಸ್ಥಾಪಕರು ರವರ ಅರ್ಜಿಯನ್ನು ಪರಿಶೀಲಿಸಿ, ವಿಚಾರಣೆಯನ್ನು ಪೂರ್ಣಗೊಳಿಸಲು ನಿರ್ದೇಶನ ನೀಡಿರುವುದರಿಂದ ವಿಚಾರಣಾ ಅವಧಿಯನ್ನು ದಿನಾಂಕ: 01–07–2016 ರಿಂದ 3 ತಿಂಗಳವರೆಗೆ ವಿಸ್ತರಿಸಲು ನಿಬಂಧಕರು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 170 ಸಂಮಾನ 2015, ಬೆಂಗಳೂರು, ದಿನಾಂಕ: 05–08–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 64 (2–ಎ)ರ ಉಪಬಂಧಗಳಲ್ಲಿಯ **ಆರು ತಿಂಗಳು** ಎಂಬ ಪದಗಳಿಗೆ ಬದಲಾಗಿ **ಎಪ್ಪತ್ತೈದು ತಿಂಗಳು** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು. ಹಾಗೂ ಸದರಿ ಅಧಿನಿಯಮ, 1959ರ ಪ್ರಕರಣ 121 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿ., ಬೆಂಗಳೂರು ಇದು ಭಾರತೀಯ ರಿಸರ್ವ್ ಬ್ಯಾಂಕಿನ ಸುತ್ತೋಲೆಗಳನ್ನು ಉಲ್ಲಂಘಿಸಿ ನಾನ್ ಎಸ್.ಎಲ್.ಆರ್. ವ್ಯವಹಾರವನ್ನು ನಡಿಸಿರುವ ಬಗ್ಗೆ ಆದೇಶಿಸಲಾದ ಕಲಂ 64ರ ವಿಚಾರಣಾ ಅವಧಿಯನ್ನು **ದಿನಾಂಕ: 01–07–2016 ರಿಂದ 31–10–2016** ರವರೆಗೆ ವಿಸ್ತರಿಸಲಾಗಿದೆ.

ಈ ಹಿಂದಿನ ಆದೇಶಗಳಲ್ಲಿ ಜಾರಿಯಲ್ಲಿದಂತೆ ಸದರಿ ಪ್ರಕರಣ 64 (2–ಎ) ಉಪಬಂಧಗಳು ಪುನಃ ಜಾರಿಯಲ್ಲಿರುತ್ತದೆ.

**PR. 554**
**SC. 50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಾಧಾಕೃಷ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

## ವಸತಿ ಸಚಿವಾಲಯ

**ವಿಷಯ :** ಕರ್ನಾಟಕ ಕೈಗೆಟಕುವ (Affordable) ವಸತಿ ನೀತಿ–2016ನ್ನು ಅನುಷ್ಠಾನಗೊಳಿಸಲು ರಾಜ್ಯ ಮಟ್ಟದ ಉನ್ನತ ಅಧಿಕಾರಯುಕ್ತ ಸಮಿತಿ(ಎಸ್.ಎಲ್.ಇ.ಸಿ.ಎ.ಹೆಚ್)ಯನ್ನು ರಚಿಸುವ ಕುರಿತು.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ:ವಇ 63 ಕಗೃಮಂ 2016, ದಿನಾಂಕ: 18–06–2016.

**ಪ್ರಸ್ತಾವನೆ:–**

ಪ್ರಸ್ತುತ ಇರುವ ವಸತಿ ಘಟಕಗಳನ್ನು ಸುಧಾರಣೆ ಮಾಡುವುದರ ಜೊತೆಗೆ, ಭವಿಷ್ಯದ ನಗರ ನಿವಾಸಿಗಳ ಅಗತ್ಯತೆಗೆ ಅನುಗುಣವಾಗಿ ನೂತನ ಧಾರಣೀಯ ವಸತಿಯ ದಾಸ್ತಾನನ್ನು ನಿರ್ಮಾಣ ಮಾಡುವುದರೊಂದಿಗೆ ಸ್ಥಳೀಯ, ರಾಜ್ಯ ಹಾಗೂ ಕೇಂದ್ರ ಸರ್ಕಾರಗಳಡಿ ಚಾಲ್ತಿಯಲ್ಲಿರುವ ಪ್ರಸಕ್ತ ವಸತಿ ಯೋಜನೆಗಳಲ್ಲಿ ಸಮನ್ವಯತೆ ತರುವುದರ ಮೂಲಕ ಅವುಗಳ ನಡುವೆ ಪರಿಣಾಮಕಾರಿ ಸಹಭಾಗಿತ್ವವನ್ನು ರೂಪಿಸಲು ಮತ್ತು ಖಾಸಗಿ ಅಭಿವೃದ್ಧಿದಾರರೊಂದಿಗೆ ಪರಿಣಾಮಕಾರಿ ಪಾಲುದಾರಿಕೆಗಳನ್ನು ನಿರ್ಮಿಸುವ ಉದ್ದೇಶದಿಂದ ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ಕೈಗೆಟಕುವ (Affordable) ವಸತಿ ನೀತಿ–2016ನ್ನು ಸರ್ಕಾರವು ಜಾರಿಗೆ ತಂದಿದೆ.

ನೀತಿಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಒಂದು ರಾಜ್ಯ ಮಟ್ಟದ ಉನ್ನತ ಅಧಿಕಾರಯುಕ್ತ ಸಮಿತಿ (ಎಸ್‌ಎಲ್.ಇ.ಎ.ಹೆಚ್)ಯನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಸ್ಥಾಪಿಸಲು ಮೇಲಿನ ಆದೇಶದಲ್ಲಿ ಅನುಮೋದಿಸಲಾಗಿದೆ. ಅದರಂತೆ ಸಮಿತಿಯನ್ನು ರಚಿಸಲು ಸರ್ಕಾರವು ಉದ್ದೇಶಿಸಿ ಈ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 63 ಕಗೃಮಂ 2016,(1) ಬೆಂಗಳೂರು, ದಿನಾಂಕ: 20–06–2016.**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಕೈಗೆಟಕುವ ವಸತಿ ನೀತಿ–2016ರ ಪರಿಣಾಮಕಾರಿ ಅನುಷ್ಠಾನಕ್ಕಾಗಿ ರಾಜ್ಯ ಮಟ್ಟದ ಉನ್ನತ ಅಧಿಕಾರಯುಕ್ತ ಸಮಿತಿ (ಎಸ್.ಎಲ್.ಇ.ಸಿ.ಎ.ಹೆಚ್)ಯನ್ನು ಈ ಕೆಳಗಿನಂತೆ ರಚಿಸಿ ಸರ್ಕಾರವು ಆದೇಶಿಸಿದೆ.

| ಕ್ರ.ಸಂ. | ರಚನೆ | ಹುದ್ದೆ |
|---|---|---|
| 1 | ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ | ಅಧ್ಯಕ್ಷರು |
| 2 | ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು, ಕರ್ನಾಟಕ ಸರ್ಕಾರ | ಉಪಾಧ್ಯಕರು |
| 3 | ಹೆಚ್ಚುವರಿ ಮುಖ್ಯ ಕಾರ್ಯದರ್ಶಿ, ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು |
| 4 | ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು |
| 5 | ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು |
| 6 | ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು |

| ಕ್ರ.ಸಂ. | ರಚನೆ | ಹುದ್ದೆ |
|---|---|---|
| 7 | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು |
| 8 | ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು |
| 9 | ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು |
| 10 | ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | ಸದಸ್ಯರು |
| 11 | ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಸದಸ್ಯರು |
| 12 | ನಿರ್ವಾಹಕ ನಿರ್ದೇಶಕರು, ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ, ಬೆಂಗಳೂರು | ಸದಸ್ಯರು |
| 13 | ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು | ಸದಸ್ಯರು |
| 14 | ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶನಾಲಯ, ಬೆಂಗಳೂರು | ಸದಸ್ಯರು |
| 15 | ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು | ಸದಸ್ಯ–ಸಂಚಾಲಕರು |

**ಉನ್ನತ ಅಧಿಕಾರಯುಕ್ತ ಸಮಿತಿಯ ಕಾರ್ಯಗಳು ಈ ಕೆಳಕಂಡಂತಿವೆ.**

1) ವಿವರವಾದ ಯೋಜನಾ ವರದಿ (ಡಿ.ಪಿ.ಆರ್.)ಗಳು ಕಾಮಗಾರಿಗಳು/ಯೋಜನೆಗಳು, ಆರ್ಥಿಕ ವಿಷಯಗಳು, ಭೂ–ಸಂಬಂಧಿತ ವಿಷಯಗಳಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡುವ ಸಲುವಾಗಿ ಎಲ್ಲ ನಿರ್ಣಯಗಳನ್ನು ಕೈಗೊಳ್ಳುವುದು.

2) ಕೇಂದ್ರ ಪುರಸ್ಕೃತ ಯೋಜನೆ (ಸಿ.ಎಸ್.ಎಸ್.) ಗಳೊಂದಿಗೆ ಒಂದುಗೂಡಿಸುವುದನ್ನು ಖಚಿತಪಡಿಸಿಕೊಳ್ಳುವುದು.

3) ಕಾರ್ಯಸಾಧ್ಯತೆ ಗ್ಯಾಪ್ ಫಂಡಿಂಗ್ ಮೂಲಕ ಯೋಜನೆಯ ವೆಚ್ಚವನ್ನು ಪರಿಶೀಲಿಸುವುದು ಅಥವಾ ಈ ನೀತಿಯ ಅಡಿಯಲ್ಲಿಯ ಮಾದರಿಗಳಲ್ಲಿ ಯಾವುದೇ ಮಾದರಿಗೆ ಅಗತ್ಯವಾದ ಇತರ ಯಾವುದೇ ವ್ಯವಸ್ಥೆಗಳನ್ನು ಪರಿಶೀಲಿಸುವುದು.

4) ಸಮಿತಿಯು ಕಾಲಕಾಲಕ್ಕೆ ವಿವರವಾದ ಮಾರ್ಗಸೂಚಿ ಮತ್ತು ನಿಯಮಗಳನ್ನು ಹೊರಡಿಸಬಹುದು ಮತ್ತು ನೀತಿಯ ಉದ್ದೇಶಕ್ಕಾಗಿ ಅಗತ್ಯ ನಿರ್ಣಯಗಳನ್ನು ಕೈಗೊಳ್ಳುವುದು.

5) ಹಾಗೂ ಸರ್ಕಾರವು ನೀಡುವ ಆದೇಶ ಹಾಗೂ ಸೂಚನೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂ.ಆಇ 2014 ವೆಚ್ಚ–9/2016, ದಿನಾಂಕ: 28–03–2016 ರನ್ವಯ ಮತ್ತು ನಗರಾಭಿವೃದ್ಧಿ ಇಲಾಖೆಯು ಅನಧಿಕೃತ ಟಿಪ್ಪಣಿ ಸಂ: ನಅಇ 230 ಸಿಎಸ್ಎಸ್ 2016, ದಿನಾಂಕ: 06–04–2016 ರನ್ವಯ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉದಯಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ವಸತಿ ಇಲಾಖೆ.(ವಸತಿ–1)

PR. 555

SC. 100

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಗೆ ಮುಖ್ಯ ಜಾಗೃತ ಅಧಿಕಾರಿ (Chief Vigilance Officer)ಅನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯು 2016, ದಿನಾಂಕ: 14–03–2016.

2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 88 ಸೇಲೋಯು 2016, ದಿನಾಂಕ: 22–06–2016.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿ: 14–03–2016ರ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಸಲಾಗಿದೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿ:22–06–2016ರ ಆದೇಶದಲ್ಲಿ ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿ:14–03–2016ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್

ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ದ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಜಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ದಿ:22-06-2016ರ ಆದೇಶದ ಆದೇಶ ಭಾಗ ದ ಕಂಡಿಕೆ 1(1)ರ ಕರ್ನಾಟಕ ಸರ್ಕಾರದ ಸಚಿವಾಲಯದ ಎಲ್ಲಾ ಇಲಾಖೆಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದ್ದೆಂದೂ ಹಾಗೂ ಆಯಾ ಇಲಾಖೆಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳ ನಂತರದ (Officer next in Seniority) ಅಧಿಕಾರಿಯನ್ನು ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿರುತ್ತದೆ.

ಅದರಂತೆ ಪರಿಶೀಲಿಸಿ, ಸರ್ಕಾರದ ಸಚಿವಾಲಯದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಲೋಇ 102 ಸ್ವೀಮರ 2016, ಬೆಂಗಳೂರು, ದಿನಾಂಕ:11-07-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಗೆ ಸಂಬಂಧಿಸಿದಂತೆ ಸರ್ಕಾರದ ಜಂಟಿ ಕಾರ್ಯದರ್ಶಿ(ಸೇವೆಗಳು) ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಇವರನ್ನು ಮುಖ್ಯ ಜಾಗೃತ ಅಧಿಕಾರಿ(Chief Vigilance Officer) ಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

**PR. 486**
**SC. 200**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಮರಿಯಪ್ಪ,**
ಸರ್ಕಾರ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ.(ಸಮನ್ವಯ)

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಮಂಗಳೂರು ಪಿಲಿಕುಳದ ಪ್ರಾದೇಶಿಕ ವಿಜ್ಞಾನ ಕೇಂದ್ರದ ಆವರಣದಲ್ಲಿ ತಾರಾಲಯವನ್ನು ಸ್ಥಾಪಿಸಲು ಉನ್ನತ ತಾಂತ್ರಿಕ ಸಲಹಾ ಸಮಿತಿ ರಚನೆ ಬಗ್ಗೆ.

**ಓದಲಾಗಿದೆ :** 1) ಆದೇಶ ಸಂಖ್ಯೆ: ವಿಯಇ 38 ವಿತ್ರಮ 2011, ದಿನಾಂಕ: 27-05-2011.

2) ಪತ್ರ ದಿನಾಂಕ:08.04.2016.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಮಂಗಳೂರಿನ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರದ ಆವರಣದಲ್ಲಿ ನೂತನ ತಾರಾಲಯವನ್ನು ಸ್ಥಾಪಿಸಲು ಹಾಗೂ ಈ ಯೋಜನೆಯ ಅನುಷ್ಠಾನಕ್ಕೆ ಮಾರ್ಗದರ್ಶನವನ್ನು ನೀಡಲು ಪರಿಣಿತರು ಮತ್ತು ತಜ್ಞರನ್ನೊಳಗೊಂಡ ಉನ್ನತ ತಾಂತ್ರಿಕ ಸಲಹಾ ಸಮಿತಿಯನ್ನು ರಚಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ ಅಧ್ಯಕ್ಷರು, ಮಂಗಳೂರು ಪಿಲಿಕುಳದ ಪ್ರಾದೇಶಿಕ ವಿಜ್ಞಾನ ಕೇಂದ್ರ ರವರು ರಾಜೀನಾಮೆ ನೀಡಿದ್ದು, ಮಂಗಳೂರು ಪಿಲಿಕುಳದ ಪ್ರಾದೇಶಿಕ ವಿಜ್ಞಾನ ಕೇಂದ್ರದ ಪರಿಣಿತರು ಮತ್ತು ತಜ್ಞರನ್ನೊಳಗೊಂಡ ಉನ್ನತ ತಾಂತ್ರಿಕ ಸಲಹಾ ಸಮಿತಿಯನ್ನು ನೇಮಿಸುವ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 140 ವಿತ್ರಮ 2016, ಬೆಂಗಳೂರು, ದಿನಾಂಕ:14-07-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮಂಗಳೂರಿನ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರದ ಅವರಣದಲ್ಲಿನ ನೂತನ ತಾರಾಲಯದ ಅನುಷ್ಠಾನಕ್ಕೆ ಮಾರ್ಗದರ್ಶನವನ್ನು ನೀಡಲು, ಕೆಳಕಂಡ ಪರಿಣಿತರು ಮತ್ತು ತಜ್ಞರನ್ನೊಳಗೊಂಡ ಉನ್ನತ ತಾಂತ್ರಿಕ ಸಲಹಾ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಲಾಗಿದೆ.

| | | | |
|---|---|---|---|
| 1) | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಪ್ರೋತ್ಸಾಹಕ ಸೊಸೈಟಿ, ಬೆಂಗಳೂರು | – | ಅಧ್ಯಕ್ಷರು |
| 2) | ನಿರ್ದೇಶಕರು, ವಿಶ್ವೇಶ್ವರಯ್ಯ ತಾಂತ್ರಿಕ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ, ಬೆಂಗಳೂರು | – | ಸದಸ್ಯರು |
| 3) | ಶ್ರೀ ಅರುಲ್ ಜೆರಾಲ್ಡ್ ಪ್ರಕಾಶ್, ನಿದೇಶಕರು, ಕೇರಳ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ವಸ್ತು ಸಂಗ್ರಹಾಲಯ, ತಿರುವನಂತಪುರ | – | ಸದಸ್ಯರು |
| 4) | ಡಾ. ಐ. ಎಂ. ಪೆರುಮಾಳ್, ಕಾರ್ಯನಿರ್ವಾಹಕ ನಿರ್ದೇಶಕರು ತಮಿಳುನಾಡು ವಿಜ್ಞಾನ ಮತ್ತು ತಂತ್ರಜ್ಞಾನ ಕೇಂದ್ರ, ಚೆನ್ನೈ | – | ಸದಸ್ಯರು |
| 5) | ನಿರ್ದೇಶಕರು (ತಾಂತ್ರಿಕ), ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು | – | ಸದಸ್ಯರು |
| 6) | ಸದಸ್ಯ ಕಾರ್ಯದರ್ಶಿ, ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ | – | ಸದಸ್ಯ ಕಾರ್ಯದರ್ಶಿ |

ಈ ಉನ್ನತ ಸಮಿತಿಯು ಕೆಳಕಂಡಂತೆ ಪರಿಶೀಲಿಸಿ ಸಮಗ್ರ ವರದಿಯನ್ನು ಸಲ್ಲಿಸಿಲು ಆದೇಶಿಸಿದೆ.

ಅ) ತಾರಾಲಯ ಸ್ಥಾಪನೆಗೆ ಸ್ಥಳ ನಿಗಧಿಪಡಿಸಿ ನಿರ್ಧರಿಸುವುದು,

ಆ) ತಾರಾಲಯ ಕಟ್ಟಡ ನಿರ್ಮಾಣಕ್ಕೆ ವಾಸ್ತುಶಿಲ್ಪ/ಆರ್ಕಿಟೆಕ್ಟ್, ಸಿವಿಲ್ ಕಾಮಗಾರಿಗಳ ನಿರ್ಧಿಷ್ಟ ಅಂಶಗಳು ಮತ್ತು ವಿನ್ಯಾಸ ಹಾಗೂ ಇತರ ಪೂರಕ ಅಂಶಗಳನ್ನು ನಿರ್ಧರಿಸುವುದು.

ಇ) ತಾರಾಲಯದ ಕಟ್ಟಡದ ನಿರ್ಮಾಣಕ್ಕೆ ಟೆಂಡರು ವಿವರಗಳ ಮತ್ತು ತಾರಾಲಯಕ್ಕೆ ಸಂಬಂಧಪಟ್ಟ ಉಪಕರಣಗಳು ಮತ್ತು ಇತರ ಮೂಲಸೌಕರ್ಯಗಳನ್ನು ನಿರ್ಧರಿಸುವುದು.

ಈ) ತಾರಾಲಯಕ್ಕೆ ಅತ್ಯಧುನಿಕ ಪ್ರೊಜೆಕ್ಟರ್ ವ್ಯವಸ್ಥೆಯ ಅನುಷ್ಠಾನಕ್ಕೆ ವಿವರಗಳನ್ನು ಹಾಗೂ ಅಂತಹ ಪ್ರೊಜೆಕ್ಟರ್ ವ್ಯವಸ್ಥೆಗಾಗಿ ಅಂತರ ರಾಷ್ಟ್ರೀಯವಾಗಿ ಟೆಂಡರು ಪ್ರಕ್ರಿಯೆಗಳನ್ನು ನಿಯಮಾನುಸಾರ ಸಿದ್ದಪಡಿಸುವುದು.

ಉ) ತಾರಾಲಯದ ಪರಿಕರ/ಉಪಕರಣ/ಪ್ರೊಜೆಕ್ಟರ್/ಕಟ್ಟಡ ಕಾಮಗಾರಿಗಳು ಮತ್ತಿತರ ಮೂಲಸೌಕರ್ಯಗಳ ಸಂಬಂಧದ ತಾಂತ್ರಿಕ ಹಾಗೂ ಆರ್ಥಿಕ ಬಿಡ್‌ಗಳನ್ನು ಮೌಲ್ಯಮಾಪನಗೊಳಿಸಿ ನಿರ್ಧರಿಸುವುದು,

ಊ) ತಾರಾಲಯದ ಯೋಜಿತ ಕಾರ್ಯಗಳು ಮತ್ತು ಅದರ ಸಂಬಂಧಿತ ಪ್ರಕ್ರಿಯೆಗಳ ಅನುಷ್ಠಾನ ಮತ್ತು ಪ್ರಗತಿಯ ಮೇಲುಸ್ತುವಾರಿ/ನಿಗಾವಹಿಸುವುದು.

PR. 487 ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

SC. 50 **ಗೀತಾ ಟಿ.ಎ.,**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,

ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಸಂಚಾರಿ ತಾರಾಲಯಗಳ ಖರೀದಿ ಹಾಗೂ ಅವುಗಳ ಸಂಪೂರ್ಣ ನಿರ್ವಹಣೆ ಬಗ್ಗೆ.

**ಓದಲಾಗಿದೆ :** 1) 2015–16ನೇ ಸಾಲಿನ ಆಯವ್ಯಯ ಭಾಷಣದ ಖಂಡಿಕೆ–438.

2) ಸರ್ಕಾರದ ಆದೇಶ ಸಂಖ್ಯೆ: ವಿಯಇ 143 ವಿತ್ರಮ 2015, ದಿನಾಂಕ: 29–09–2015.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1) ರ 2015–16ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 438 ರಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಡಿ ನಾಲ್ಕು ಸಂಚಾರಿ ತಾರಾಲಯಗಳನ್ನು ₹.5.00 ಕೋಟಿ ವೆಚ್ಚದಲ್ಲಿ ಖರೀದಿಸಲು ಸನ್ಮಾನ್ಯ ಮುಖ್ಯ ಮಂತ್ರಿಗಳು ಘೋಷಿಸಿರುತ್ತಾರೆ. ಸದರಿ ಸಂಚಾರಿ ತಾರಾಲಯವನ್ನು ಖಗೋಳ ವಿಜ್ಞಾನಕ್ಕೆ ಸಂಬಂಧಿಸಿದಂತೆ ವಿದ್ಯಾರ್ಥಿಗಳಿಗೆ ಹೆಚ್ಚಿನ ಅರಿವು, ಆಸಕ್ತಿ, ಕುತೂಹಲ ಹಾಗೂ ವೈಚಾರಿಕತೆಯನ್ನು ಬೆಳೆಸುವ ಉದ್ದೇಶವನ್ನು ಹೊಂದಿರುತ್ತದೆ. ಅದರಂತೆ, ಸಂಚಾರಿ ತಾರಾಲಯವನ್ನು ಕೆಸ್ಟೆಪ್ಸ್ ಸಂಸ್ಥೆಯ ಮುಖಾಂತರ ಕರ್ನಾಟಕ ಪಾರದರ್ಶಿಕ ನಿಯಮಾನುಸಾರ ಕಾಯ್ದೆಯನ್ವಯ ಖರೀದಿಸಿ, ಅವುಗಳ ನಿರ್ವಹಣೆಯನ್ನು ಮೂರು ಶೈಕ್ಷಣಿಕ ವರ್ಷಗಳವರೆಗೆ ನಿರ್ವಹಿಸಲು ಅಗತ್ಯ ಕ್ರಮ ಕೈಗೊಳ್ಳುವಂತೆ ಸೂಚಿಸಲಾಗಿತ್ತು. ಅಲ್ಲದೇ, ಆರಂಭದಲ್ಲಿ ಒಂದು ಸಂಚಾರಿ ತಾರಾಲಯವನ್ನು ಖರೀದಿಸಿ, ಅದರ ಎರಡು ತಿಂಗಳ ಅನುಷ್ಠಾನದ ಯಶಸ್ಸಿನ ಆಧಾರದ ಮೇಲೆ ಉಳಿದ ಮೂರು ತಾರಾಲಯಗಳನ್ನು ಹಾಗೂ ಅವುಗಳ ನಿರ್ವಹಣೆಯ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲು ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (2) ರಂತೆ ಕೆಸ್ಟೆಪ್ಸ್ ಸಂಸ್ಥೆಯು ಇ–ಟೆಂಡರ್ ಮುಖಾಂತರ ಸಂಚಾರಿ ತಾರಾಲಯಗಳ ಖರೀದಿಸುವ ಹಾಗೂ ಅವುಗಳ ಮೂರು ವರ್ಷದ ನಿರ್ವಹಣೆಯ ಪ್ರಕ್ರಿಯೆಯನ್ನು ಪೂರ್ಣಗೊಳಿಸಿದ್ದು, ಮೇಲಿನ ಸೂಚನೆಯಂತೆ ಮೊದಲಿಗೆ ಮಾರಾಟಗಾರದಿಂದ ಒಂದು ತಾರಾಲಯವನ್ನು ಖರೀದಿಸಿ, ಎರಡು ತಿಂಗಳ ಅವಧಿಯವರೆಗೆ ಬೆಂಗಳೂರಿನ ವಿಭಾಗದಲ್ಲಿ ಅನುಷ್ಠಾನಗೊಳಿಸಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತದೆ. ಈ ಕೋರಿಕೆಯಂತೆ, ಒಂದು ಸಂಚಾರಿ ತಾರಾಲಯದ ಖರೀದಿಗೆ ₹. 1,19,62,788/– ವೆಚ್ಚವಾಗಲಿದ್ದು, ಅದರ ಎರಡು ತಿಂಗಳ ಅನುಷ್ಠಾನಕ್ಕೆ ₹.4.00 ಲಕ್ಷಗಳ ಅಗತ್ಯವಿದೆಯೆಂದು ತಿಳಿಸಲಾಗಿರುತ್ತದೆ. ಅಲ್ಲದೇ ಈ ಪ್ರಾಥಮಿಕ ಯೋಜನೆ ಅನುಷ್ಠಾನ ಯಶಸ್ವಿಯಾದರೆ, ಒಂದು ತಾರಾಲಯಕ್ಕೆ ₹.1,19,62,788/– ಗಳಂತೆ ಒಟ್ಟು ನಾಲ್ಕು ತಾರಾಲಯಗಳಿಗೆ ₹. 4,78,51,152/– ಗಳಾಗಲಿದ್ದು, ಅವುಗಳ ಮೂರು ವರ್ಷಗಳ ಪೂರ್ಣಾವಧಿಯ ಅನುಷ್ಠಾನಕ್ಕೆ ₹.3,80,23,768/– ವೆಚ್ಚವಾಗಲಿದೆಯೆಂದು ಸಹ ತಿಳಿಸಲಾಗಿರುತ್ತದೆ. ಅದರಂತೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 139 ವಿತ್ರಮ 2016, ಬೆಂಗಳೂರು, ದಿನಾಂಕ:13–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೆಸ್ಟೆಪ್ಸ್ ಸಂಸ್ಥೆ ಪ್ರಾರಂಭಿಕವಾಗಿ ಒಂದು ಸಂಚಾರಿ ತಾರಾಲಯವನ್ನು ₹. 1,19,62,788/– ವೆಚ್ಚದಲ್ಲಿ ಖರೀದಿಸಿ, ಅದನ್ನು ಎರಡು ತಿಂಗಳುಗಳ ಅವಧಿಯವರೆಗೆ ₹. 4.00 ಲಕ್ಷಗಳ ವೆಚ್ಚದಲ್ಲಿ ಬೆಂಗಳೂರು ವಿಭಾಗದ ಸರ್ಕಾರಿ ಶಾಲೆಗಳಲ್ಲಿ ಅನುಷ್ಠಾನಗೊಳಿಸುವುದು. ಈ ಅನುಷ್ಠಾನದ ಪ್ರಗತಿ ಮತ್ತು ಯಶಸ್ವಿನ ಆಧಾರದ ಮೇಲೆ ಸರ್ಕಾರಕ್ಕೆ ವರದಿ ಸಲ್ಲಿಸಿ, ಉಳಿದ ಮೂರು ಸಂಚಾರಿ ತಾರಾಲಯಗಳ ಖರೀದಿ ಹಾಗೂ ಅವುಗಳ ಮೂರು ವರ್ಷಗಳ ನಿರ್ವಹಣೆ ಬಗ್ಗೆ ಸರ್ಕಾರದ ಪ್ರತ್ಯೇಕ ಆದೇಶವನ್ನು ಪಡೆಯುವಂತೆ ಸೂಚಿಸಿದೆ.

ಉದ್ದೇಶಿತ ಒಂದು ಸಂಚಾರಿ ತಾರಾಲಯದ ಖರೀದಿ ಮತ್ತು ಅದರ ಎರಡು ತಿಂಗಳ ನಿರ್ವಹಣೆಗೆ ಅಗತ್ಯವಿರುವ ಅನುದಾನವಾದ ₹.1,23,62,788/–ಗಳನ್ನು 2016–17ರ ಆಯವ್ಯಯದ ಲೆಕ್ಕಶೀರ್ಷಿಕೆಯಾದ ವಿಜ್ಞಾನ ಮತ್ತು ತಂತ್ರಜ್ಞಾನ ಯೋಜನೆಗಳ ಸಹಾಯನುದಾನ 3425–60–200–0–16 (059) (ಯೋಜನೆ) ಗಳಡಿ ವೆಚ್ಚವನ್ನು ಭರಿಸುವುದು.

PR. 488

SC. 25

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೀತಾ ಟಿ.ಎ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,

ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ :** **ಶ್ರೀ.ಡಿ.ಡಿ.ಹಲಗಿ,** ನಿವೃತ್ತ 'ಡಿ' ದರ್ಜೆ ನೌಕರರು, ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆ ಇವರಿಗೆ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ 247 (ಎ)(1)ರನ್ವಯ ಸೌಲಭ್ಯವನ್ನು ನೀಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆ ಇವರ ಪತ್ರ ಸಂಖ್ಯೆ ಪಿ.ಸ.ಆ.ಋ.(3)74/15–16, ದಿನಾಂಕ: 07–12–2015 & 01–03–2016.

**ಪ್ರಸ್ತಾವನೆ:**

**ಶ್ರೀ.ಡಿ.ಡಿ.ಹಲಗಿ,** ನಿವೃತ್ತ 'ಡಿ' ದರ್ಜೆ ನೌಕರರು, ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆ ಇವರು ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆಯಲ್ಲಿ ದಯಲಾತ್ ಆಗಿ ನೇಮಕಾತಿ ಹೊಂದಿ ದಿನಾಂಕ: 10–07–1984ರಂದು ಸೇವೆಗೆ ಸೇರಿರುತ್ತಾರೆ. ಈ ನೌಕರರ ಜನ್ಮ ದಿನಾಂಕವು 01–06–1951 ಆಗಿದ್ದು, ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆಯಲ್ಲಿ ಕರ್ತವ್ಯಕ್ಕೆ ಸೇರ್ಪಡೆಗೊಳ್ಳುವಾಗ ಇವರ ವಯಸ್ಸು 30 ವಯೋಮಿತಿ ಮೀರಿರುವುದಾಗಿದೆ. ಆದ್ದರಿಂದ, ಇವರಿಗೆ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 247 (ಎ) ಪ್ರಕಾರ ನಿವೃತ್ತಿ ವೇತನ ಸೌಲಭ್ಯಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 77 ಸಉಲಾ 2015, ಬೆಂಗಳೂರು, ದಿನಾಂಕ:02–05–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, **ಶ್ರೀ.ಡಿ.ಡಿ.ಹಲಗಿ,** ನಿವೃತ್ತ 'ಡಿ' ದರ್ಜೆ ನೌಕರರು, ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆ ಇವರ ಜನ್ಮ ದಿನಾಂಕವು 01–06–1951 ಆಗಿದ್ದು, ದಿನಾಂಕ 10–07–1984ರಂದು ಅಂದರೆ, 33 ವರ್ಷಗಳ ವಯಸ್ಸಿನ ನಂತರ ಸರ್ಕಾರಿ ಸೇವೆಗೆ ಸೇರಿರುವುದು ಅವರ ಸೇವಾ ಪುಸ್ತಕದಿಂದ ದೃಢಪಡುವುದರಿಂದ ಹಾಗೂ ದಿನಾಂಕ: 31–05–2011ರಂದು ನಿವೃತ್ತಿ ಹೊಂದಿರುವುದರಿಂದ, ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 247 (ಎ)(1) ರನ್ವಯ ಮೂರು ವರ್ಷಗಳ ಅಧಿಕ ಸೇವಾವಧಿಯನ್ನು ಪ್ರಸ್ತುತ ಸೇವೆಯ ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 329 ಸೇ–3/16, ದಿನಾಂಕ: 12–04–2016 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

PR. 490

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಲಕ್ಷ್ಮಣ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ.(ಆಡಳಿತ & ಮುಂಗಡಗಳು)

## ಕಾನೂನು ಸಚಿವಾಲಯ

**ವಿಷಯ :** **ವಿವೇಕಾನಂದ ಕಾನೂನು ಕಾಲೇಜು, ಬೆಂಗಳೂರು** ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಹುದ್ದೆಗಳ ನೇಮಕಾತಿಯನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರಿ ಆದೇಶ ಸಂಖ್ಯೆ: ಲಾ 81 ಕೆಎಲ್ಎಂ 2009, ದಿನಾಂಕ: 28–11–2012.
2) ಸರ್ಕಾರಿ ಆದೇಶ ಸಂಖ್ಯೆ: ಲಾ 56 ಕೆಎಲ್ಎಂ 2013, ದಿನಾಂಕ: 26–08–2015.
3) ಸರ್ಕಾರದ ತಿದ್ದೋಲೆ ಸಂಖ್ಯೆ: ಲಾ 56 ಕೆಎಲ್ಎಂ 2013, ದಿನಾಂಕ: 18–12–2015.
4) ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಕಾಶಿಇ/27/ಲಾ/ಖಾಕಾಕಾ/2012–13/ಕಾಕಾವಿ/ನೇವಿ–1(ಭಾಗ–2), ದಿನಾಂಕ:12.02.2016.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರಿ ಆದೇಶ ದಿನಾಂಕ: 28.11.2012ರಲ್ಲಿ ಪ್ರೊ. ಮಾಲಿ ಮುದ್ದಣ ವರದಿಯನ್ನಾಧರಿಸಿ ಸರ್ಕಾರವು ಸುಸ್ಥಿತಿಯಲ್ಲಿರುವ ಹಾಗೂ ಸತತವಾಗಿ ಆಯಾ ವಿಶ್ವವಿದ್ಯಾಲಯಗಳಿಗೆ 5 (ಐದು) ವರ್ಷಗಳ ಎಲ್.ಎಲ್.ಬಿ ಕೋರ್ಸು ಅಥವಾ 3 (ಮೂರು) ವರ್ಷಗಳ ಎಲ್.ಎಲ್.ಬಿ ಕೋರ್ಸು ಅಥವಾ ಎರಡೂ ಅವಧಿಯ ಎಲ್.ಎಲ್.ಬಿ. ಕೋರ್ಸ್‌ಗಳನ್ನು ನಡೆಸಲು ಸಂಯೋಜನೆ ಮಾಡಿಕೊಂಡಿದ್ದ ಒಟ್ಟು 19 ಖಾಸಗಿ ಕಾನೂನು ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಲು ತಾತ್ವಿಕವಾಗಿ ಒಪ್ಪಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಸರ್ಕಾರದ ಅನುದಾನಕ್ಕೆ ಒಳಪಡಿಸಿದ ಖಾಸಗಿ ಕಾನೂನು ಕಾಲೇಜುಗಳ ಪೈಕಿ ಕ್ರಮ ಸಂಖ್ಯೆ: (18) ರ **ವಿವೇಕಾನಂದ ಕಾನೂನು ಕಾಲೇಜು, ಬೆಂಗಳೂರು** ಇಲ್ಲಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ನೇಮಕಾತಿಯನ್ನು ಅನುಮೋದಿಸಲಾಗಿದೆ.

ಸದರಿ ಆದೇಶದಲ್ಲಿ ಕೆಲವೊಂದು ಕಾರಣಕ್ಕಾಗಿ ಬೋಧಕ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸಿರುವುದಿಲ್ಲ, ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸದೇ ಇರುವ ಪ್ರಕರಣಗಳ ಬಗ್ಗೆ ಸಂಬಂಧಪಟ್ಟ ಸಿಬ್ಬಂದಿಗಳು ಈ ಆದೇಶ ಹೊರಡಿಸಿದ ಒಂದು ತಿಂಗಳೊಳಗಾಗಿ ಯುಕ್ತ ಮಾರ್ಗದಲ್ಲಿ ಅಗತ್ಯ ದಾಖಲಾತಿಗಳೊಂದಿಗೆ ಸರ್ಕಾರಕ್ಕೆ ಮನವಿ ಸಲ್ಲಿಸಿದಲ್ಲಿ, ಅಂತಹ ಮನವಿಗಳನ್ನು ನಿಯಮಾನುಸಾರ ಪರಿಶೀಲಿಸಲಾಗುವುದು ಎಂದು ದಿನಾಂಕ: 26.08.2015ರ ಆದೇಶದಲ್ಲಿ ಸೂಚಿಸಲಾಗಿತ್ತು.

ಅದರಂತೆ, ಮೇಲೆ ಓದಲಾದ (4)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ದಿನಾಂಕ: 26.08.2015ರ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸದೇ ಇರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಬಗ್ಗೆ ಮಾಹಿತಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

**ವಿವೇಕಾನಂದ ಕಾನೂನು ಕಾಲೇಜು**, ಬೆಂಗಳೂರು ಇಲ್ಲಿ 22–ಬೋಧಕ ಮತ್ತು 19–ಬೋಧಕೇತರ ಹುದ್ದೆಗಳು ಮಂಜೂರಾಗಿದ್ದು, ದಿನಾಂಕ:26.08.2015ರ ಸರ್ಕಾರಿ ಆದೇಶದಲ್ಲಿ 04–ಬೋಧಕರು ಮತ್ತು 09–ಬೋಧಕೇತರ ಹುದ್ದೆಗಳನ್ನು ವೇತನಾನುದಾನಕ್ಕೆ ಒಳಪಡಿಸಲಾಗಿದೆ. ಬೋಧಕ ಹುದ್ದೆಗಳ ಪೈಕಿ 04–ಮೀಸಲಾತಿ ಹುದ್ದೆಗಳನ್ನು ಹೊರತುಪಡಿಸಿ, 13–ಸಹಾಯಕ ಪ್ರಾಧ್ಯಾಪಕರು, 01–ದೈಹಿಕ ಶಿಕ್ಷಣ ಹುದ್ದೆ ಖಾಲಿಯಿರುತ್ತದೆ. ದಿನಾಂಕ: 26.08.2015ರ ಸರ್ಕಾರಿ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸಿದರುವ ಸಹಾಯಕ ಪ್ರಾಧ್ಯಾಪಕರಾದ ಕೆ.ಸತೀಶ್ ಇವರು ರಾಜೀನಾಮೆ ಸಲ್ಲಿಸಿರುವುದರಿಂದ ಒಟ್ಟು 14–ಸಹಾಯಕ ಪ್ರಾಧ್ಯಾಪಕರ ಹುದ್ದೆಗಳು ಖಾಲಿಯಿರುತ್ತದೆ. ಬೋಧಕೇತರ ಹುದ್ದೆಗಳ ಪೈಕಿ 07 ಮೀಸಲಾತಿ ಹುದ್ದೆಗಳನ್ನು ಹೊರತುಪಡಿಸಿ 01–ದ್ವಿ.ದ.ಸ, 02–ಪರಿಚಾರಕರ ಹುದ್ದೆ ಖಾಲಿಯಿರುತ್ತದೆ.

ದಿನಾಂಕ:26.08.2015ರ ಸರ್ಕಾರಿ ಆದೇಶದಲ್ಲಿ ಸಹಾಯಕ ಪ್ರಾಧ್ಯಾಪಕರುಗಳಾದ ಎಸ್.ವಿ.ನಾಗೇಶ್ವರ ರಾವ್ ಮತ್ತು ಶ್ರೀಮತಿ ಸುಮಿತ್ರ ಆರ್, ಇವರುಗಳನ್ನು ನೇಮಕಾತಿ ಸಮಯದಲ್ಲಿ ವಯೋಮಿತಿ ಮೀರಿರುವುದರಿಂದ ವೇತನಾನುದಾನಕ್ಕೆ ಒಳಪಡಿಸಿರುವುದಿಲ್ಲ, ಎಸ್.ವಿ.ನಾಗೇಶ್ವರ ರಾವ್ ಇವರು ಡಿ.ಎಸ್.ಆರ್. ಹಿಂದು ಕಾಲೇಜು ಆಫ್ ಇಂಡಿಯಾ, ಮಂಚಲಿ ಪಟ್ಟಣಂ, ಇಲ್ಲಿ ದಿನಾಂಕ: 20.02.1986ರಿಂದ 31.08.1996ರವರೆಗೆ ಹಾಗೂ ಡಾ॥ ಅಂಬೇಡ್ಕರ್ ಲಾ ಕಾಲೇಜು ತಿರುಪತಿ, ಇಲ್ಲಿ ದಿನಾಂಕ:01.09.1996ರಿಂದ 26.08.1999ರವೆರೆಗೆ ಕಾರ್ಯನಿರ್ವಹಿಸಿದ್ದು, ನಂತರ ವಿವೇಕಾನದ ಕಾನೂನು ಕಾಲೇಜಿನಲ್ಲಿ ದಿನಾಂಕ:27.08.1999 ಕರ್ತವ್ಯ ನಿರ್ವಹಿಸುತ್ತಿದ್ದು ಈ ಹಿಂದಿನ ಸೇವೆಯನ್ನು ಪರಿಗಣಿಸಿ ಇವರನ್ನು ಸರ್ಕಾರಿ ಅಧಿಸೂಚನೆ ಸಂಖ್ಯೆ:F-1-11/87(CPP), ದಿನಾಂಕ:19.09.1991ರನ್ವಯ ಸದರಿಯವರು ದಿನಾಂಕ:19.09.1991ರೊಳಗೆ ನೇಮಕಾತಿ ಹೊಂದಿರುವುದರಿಂದ ಹಾಗೂ ಎಲ್.ಎಲ್.ಎಂ.ನಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದಿರುವುದರಿಂದ ಇವರಿಗೆ **ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ವೇತನಾನುದಾನಕ್ಕೆ ಒಳಪಡಿಸಬಹುದು** ಎಂದು ಹಾಗೂ ಶ್ರೀಮತಿ ಸುಮಿತ್ರ ಆರ್. ಇವರು ದಿನಾಂಕ: 14.08.2000 ದಿಂದ 25.09.2004 ರವರೆಗೆ ವಿಶ್ವೇಶ್ವರಪುರಂ ಕಾನೂನು ಕಾಲೇಜು, ಬೆಂಗಳೂರು ಮತ್ತು ದಿನಾಂಕ:26.09.2004 ರಿಂದ 21.01.2013 ರವರೆಗೆ ಶೇಷಾದ್ರಿಪುರಂ ಕಾಲೇಜಿನಲ್ಲಿ ಕರ್ತವ್ಯ ನಿರ್ವಹಿಸಿದ್ದು, ಈ ಅವಧಿಯನ್ನು ಪರಿಗಣಿಸಿ ವೇತನಾನುದಾನಕ್ಕೆ ಒಳಪಡಿಸಬಹುದು ಮತ್ತು ಸದರಿಯವರು ದಿನಾಂಕ: 26.06.2005ರಂದು ಎನ್‌ಇಟಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದು ಇವರನ್ನು ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ವೇತನಾನುದಾನಕ್ಕೆ ಒಳಪಡಿಸಬಹುದಾಗಿದೆ ಎಂದು ಕಾಲೇಜು ಶಿಕ್ಷಣ ಆಯುಕ್ತರು ಅಭಿಪ್ರಾಯ ನೀಡಿರುತ್ತಾರೆ.

ದಿನಾಂಕ:26.08.2015ರ ಸರ್ಕಾರಿ ಆದೇಶದಲ್ಲಿ ಶ್ರೀಮತಿ ಭುವನೇಶ್ವರಿ ಎಸ್., ಕೋಲಾಕಿ ಸಹಾಯಕ ಪ್ರಾಧ್ಯಾಪಕರು, ಇವರು ನಿಗದಿತ ವಿದ್ಯಾರ್ಹತೆಯಾದ ಎನ್‌ಇಟಿ/ಎಸ್‌ಎಲ್‌ಇಟಿ/ ಪಿಹೆಚ್‌ಡಿ ಪದವಿ ಪಡೆದಿರುವುದಿಲ್ಲವಾದ್ದರಿಂದ ಇವರನ್ನು ವೇತನಾನುದಾನಕ್ಕೆ ಒಳಪಡಿಸಿರುವುದಿಲ್ಲ, ಆದರೆ ಸದರಿಯವರು ದಿನಾಂಕ:28.04.2014ರಂದು ಕೆ.ಎಸ್.ಇ.ಟಿ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದರಿಂದ ಇವರನ್ನು ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ವೇತನಾನುದಾನಕ್ಕೆ ಒಳಪಡಿಸಬಹುದೆಂದು ಕಾಲೇಜು ಶಿಕ್ಷಣ ಆಯುಕ್ತರು ಅಭಿಪ್ರಾಯ ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 56 ಕೆಎಲ್ಎಂ 2013, ಬೆಂಗಳೂರು, ದಿನಾಂಕ: 16.07.2016.**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿವೇಕಾನಂದ ಕಾನೂನು ಕಾಲೇಜು ಬೆಂಗಳೂರು ಇಲ್ಲಿ 14–ಜಿ.ಎಂ. ಸಹಾಯಕ ಪ್ರಾಧ್ಯಾಪಕರ ಹುದ್ದೆಗಳು ಖಾಲಿಯಿದ್ದು. ಈ ಕೆಳಕಂಡ ಮೂರು ಸಹಾಯಕ ಪ್ರಾಧ್ಯಾಪಕರುಗಳನ್ನು ಆದೇಶ ಹೊರಡಿಸಿದ ದಿನಾಂಕದಿಂದ ಈ ಕೆಳಕಂಡ ಷರತ್ತುಗಳೊಂದಿಗೆ ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರವು ಸಹಮತಿ ನೀಡಿದೆ.

| ಕ್ರ.ಸಂ. | ಹೆಸರು ಮತ್ತು ಹುದ್ದೆ | ಜನ್ಮ ದಿನಾಂಕ | L.L.M ಶೇಕಡಾ ಅಂಕ | ಮೀಸಲಾತಿ | ಸೇವೆಗೆ ಸೇರಿದ ದಿನಾಂಕ | ವೇತನ ಶ್ರೇಣಿ |
|---|---|---|---|---|---|---|
| 1. | ಭುವನೇಶ್ವರಿ ಎಸ್. ಕೋಲಾಕಿ, ಸಹಾಯಕ ಪ್ರಾಧ್ಯಾಪಕರು | 27.10.1979 | 57.75 | 2ಎ | 02.01.2013 | ಯು.ಜಿ.ಸಿ. ವೇತನ ಶ್ರೇಣಿ (ಕೆ.ಎಸ್.ಇ.ಟಿ. ವಿದ್ಯಾರ್ಹತೆ ಹೊಂದಿರುತ್ತಾರೆ) |
| 2. | ಎಸ್.ವಿ. ನಾಗೇಶ್ವರ ರಾವ್, ಸಹಾಯಕ ಪ್ರಾಧ್ಯಾಪಕರು | 15.07.1958 | 60.75 | ಜಿ.ಎಂ | 20.02.1986 | ಯು.ಜಿ.ಸಿ ವೇತನ ಶ್ರೇಣಿ |

| ಕ್ರ.ಸಂ. | ಹೆಸರು ಮತ್ತು ಹುದ್ದೆ | ಜನ್ಮ ದಿನಾಂಕ | L.L.M ಶೇಕಡಾ ಅಂಕ | ಮೀಸಲಾತಿ | ಸೇವೆಗೆ ಸೇರಿದ ದಿನಾಂಕ | ವೇತನ ಶ್ರೇಣಿ |
|---|---|---|---|---|---|---|
| 3. | ಸುಮಿತ್ರ ಆರ್. ಸಹಾಯಕ ಪ್ರಾಧ್ಯಾಪಕರು, | 08.05.1972 | 55 | ಜಿ.ಎಂ. | 14.08.2000 | ಯು.ಜಿ.ಸಿ ವೇತನ ಶ್ರೇಣಿ (ಎಸ್.ಇ.ಟಿ. ವಿದ್ಯಾರ್ಹತೆ ಹೊಂದಿರುತ್ತಾರೆ. |

**ಷರತ್ತುಗಳು :**

1) ಹಿಂದುಳಿದ ವರ್ಗಗಳ ಪ್ರಾತಿನಿಧ್ಯದಲ್ಲಿ ಮೀಸಲಾತಿ ಕೊರತೆಯನ್ನು ಭವಿಷ್ಯತ್ತಿನಲ್ಲಿ ತೆರವಾಗುವ ಎಲ್ಲಾ ಹುದ್ದೆಗಳನ್ನು ಮೀಸಲಾತಿ ಕೊರತೆ ಸರಿದೂಗುವವರೆಗೆ ಸಂಬಂಧಪಟ್ಟ ಮೀಸಲಾತಿ ಅಭ್ಯರ್ಥಿಗಳಿಂದಲೇ ಕಡ್ಡಾಯವಾಗಿ ನೇಮಕಾತಿ ಮಾಡಿಕೊಳ್ಳತಕ್ಕದ್ದು.
2) ಈ ಕಾಲೇಜಿನ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಗಳ ಶೈಕ್ಷಣಿಕ ಅರ್ಹತೆಗೆ ಸಂಬಂಧಿಸಿದ ಎಲ್ಲಾ ಅಂಕಪಟ್ಟಿ/ಪ್ರಮಾಣ ಪತ್ರಗಳ ಸತ್ಯಾಸತ್ಯತೆಯನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ದೃಢೀಕರಿಸಿಕೊಂಡ ನಂತರವೇ ಪಾವತಿಗೆ ಕ್ರಮಕೈಗೊಳ್ಳುವುದು.
3) ಈ ಆದೇಶದನ್ವಯ ವೇತನಾನುದಾನಕ್ಕೆ ಒಳಪಟ್ಟಿರುವ ಬೋಧಕ ಹಾಗೂ ಬೋಧಕೇತರರ ಸಿಬ್ಬಂದಿಗಳಿಗೆ ವೇತನ ಬಿಡುಗಡೆ ಮಾಡುವ ಮುನ್ನ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳ ಅಡಿಯಲ್ಲಿ ನೇಮಕಾತಿ ಹೊಂದಿದ್ದಲ್ಲಿ ಅಂತಹ ಸಿಬ್ಬಂದಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಖಚಿತಪಡಿಸಿಕೊಳ್ಳತಕ್ಕದ್ದು.
4) ಹುದ್ದೆ ಅನುಮೋದನೆಗೊಂಡಿರುವ ಸಿಬ್ಬಂದಿಯು ಯಾವುದೇ ಹಂತದಲ್ಲಿ ತಮ್ಮ ಹೇಳಿಕೆ/ಅಸತ್ಯವಾದ ಮಾಹಿತಿಯನ್ನು ಒದಗಿಸಿದಲ್ಲಿ ಅಂತಹ ನೇಮಕಾತಿಯನ್ನು ರದ್ದುಪಡಿಸಲಾಗುವುದು.
5) ಸಿಬ್ಬಂದಿಗಳ ವೇತನಾನುದಾನವು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.
6) ದಿನಾಂಕ: 24.12.1998ಕ್ಕಿಂತ ಹಿಂದೆ ನೇಮಕವಾದ ಉಪನ್ಯಾಸಕರುಗಳು ಸೇವಾ ವಿಚ್ಛಿನ್ನತೆಯನ್ನು ಹೊಂದಿರಬಾರದು.
7) ಮುಂದೆ ತುಂಬಲಾಗುವ ಹುದ್ದೆಗಳಿಗೆ ಸಂಬಂಧಿಸಿದ ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿಯನ್ನು ಪಡೆಯತಕ್ಕದ್ದು.
8) ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯವರು ಅನುದಾನ ರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ಯಾವುದೇ ಸೇವಾ ಸೌಲಭ್ಯಗಳಿಗೆ ಪರಿಗಣಿಸಲಾಗುವುದಿಲ್ಲ ಎಂಬ ಷರತ್ತಿಗೆ ಬದ್ಧನಾಗಿರುತ್ತೇನೆಂದು ₹. 50/- ಛಾಪಾ ಕಾಗದದಲ್ಲಿ ಮುಚ್ಚಳಿಕೆ ಪತ್ರವನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಬರೆಯಿಸಿಕೊಳ್ಳತಕ್ಕದ್ದು.
9) ಮೇಲಿನ ಆದೇಶದನ್ವಯ ಈ ಕಾಲೇಜಿಗೆ ಸಂಬಂಧಿಸಿದಂತೆ ನೇಮಕವಾಗಿರುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳಿಗೆ ವೇತನಾನುದಾನವನ್ನು ಬಿಡುಗಡೆ ಮಾಡುವ ಮುನ್ನ ನ್ಯಾಯಾಲಯದಲ್ಲಿ ಯಾವುದೇ ವಿಧವಾದ ವ್ಯಾಜ್ಯ/ವಿವಾದ ಬಾಕಿ ಇರುವುದಿಲ್ಲ ಎಂಬುದನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಖಚಿತಪಡಿಸಿಕೊಳ್ಳತಕ್ಕದ್ದು.
10) ಸದರಿ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸಿರುವ ಸಿಬ್ಬಂದಿಗಳನ್ನು ಹೆಚ್.ಆರ್.ಎಂ.ಎಸ್.ನಲ್ಲಿ ಅಳವಡಿಸಲು ಅಗತ್ಯ ಕ್ರಮ ಕೈಗೊಳ್ಳುವುದು.
11) ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾಗುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳನ್ನು ನೇಮಕಾತಿಗಾಗಿ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಿ ಸರ್ಕಾರದ ಪೂರ್ವಾನುಮತಿಯನ್ನು ಪಡೆಯುವುದು.
12) ಸಂಬಂಧಪಟ್ಟ ಜಂಟಿ ನಿರ್ದೇಶಕರು ಪ್ರತಿ ವರ್ಷವು ವೇತನಾನುದಾನಕ್ಕೆ ಒಳಪಟ್ಟಿರುವ ಕಾಲೇಜಿನ ಆಡಳಿತ ಮಂಡಳಿಯು ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವುದನ್ನು ದೃಢೀಕರಿಸಿದ ನಂತರವೇ ಆಯುಕ್ತಾಲಯದಿಂದ ಅನುದಾನ ಬಿಡುಗಡೆ ಮಾಡತಕ್ಕದ್ದು.
13) ವೇತನಾನುದಾನ ಬಿಡುಗಡೆಗೆ ಸಂಬಂಧಿಸಿದಂತೆ ಯಾವುದೇ ನ್ಯೂನತೆಗಳು ಉಂಟಾದಲ್ಲಿ ಸಂಬಂಧಪಟ್ಟ ಪ್ರಾದೇಶಿಕ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆಯವರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

ಮೇಲೆ ಅನುದಾನಕ್ಕೆ ಒಳಪಡಿಸಿರುವ ವಿವೇಕಾನಂದ ಕಾನೂನು ಕಾಲೇಜು, ಬೆಂಗಳೂರು ಈ ಸಂಸ್ಥೆಯ ವೇತನಾನುದಾನದ ವೆಚ್ಚವನ್ನು ಕಾನೂನು ಇಲಾಖೆಯ ಲೆಕ್ಕ ಶೀರ್ಷಿಕೆ ಸಂಖ್ಯೆ:2014–00–105–0–15 Private Aided Law Colleges-101-Grant-in aid Schemes (Plan) ರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 176 ವೆಚ್ಚ–10/2016, ದಿನಾಂಕ: 11.07.2016ರ ಸಹಮತಿಯನ್ವಯ ಹೊರಡಿಸಲಾಗಿದೆ.

**PR. 491**

**SC.100**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಸ್. ಸುಧಾಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ.(ಮಾನವ ಹಕ್ಕುಗಳು)

## ಕಾನೂನು ಸಚಿವಾಲಯ

**ವಿಷಯ :** **ವೈಕುಂಠ ಬಾಳಿಗಾ ಕಾನೂನು ಕಾಲೇಜು, ಉಡುಪಿ** ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಹುದ್ದೆಗಳ ನೇಮಕಾತಿಯನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಲಾ 81 ಕೆಎಲ್ಎಂ 2009, ದಿನಾಂಕ: 28–11–2012.

2) ಸರ್ಕಾರಿ ಆದೇಶ ಸಂಖ್ಯೆ: ಲಾ 49 ಕೆಎಲ್ಎಂ 2013, ದಿನಾಂಕ: 26–08–2015.

3) ಸರ್ಕಾರದ ತಿದ್ದೋಲೆ ಸಂಖ್ಯೆ: ಲಾ 49 ಕೆಎಲ್ಎಂ 2013, ದಿನಾಂಕ: 18–12–2015.

4) ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಕಾಶಿಇ/06/ಲಾ/ಖಾಕಾಕಾ/2012–13/ಕಾಕಾವಿ/ನೇವಿ–2, ದಿನಾಂಕ: 06.02.2016.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರಿ ಆದೇಶ ದಿನಾಂಕ: 28.11.2012ರಲ್ಲಿ ಪ್ರೊ, ಮಾಲಿ ಮುದ್ದಣ ವರದಿಯನ್ನಾಧರಿಸಿ ಸರ್ಕಾರವು ಸುಸ್ಥಿತಿಯಲ್ಲಿರುವ ಹಾಗೂ ಸತತವಾಗಿ ಆಯಾ ವಿಶ್ವವಿದ್ಯಾಲಯಗಳಿಗೆ 5 (ಐದು) ವರ್ಷಗಳ ಎಲ್.ಎಲ್.ಬಿ ಕೋರ್ಸು ಅಥವಾ 3 (ಮೂರು) ವರ್ಷಗಳ **ಎಲ್.ಎಲ್.ಬಿ ಕೋರ್ಸು ಅಥವಾ ಎರಡೂ ಅವಧಿಯ ಎಲ್.ಎಲ್.ಬಿ.** ಕೋರ್ಸ್‌ಗಳನ್ನು ನಡೆಸಲು ಸಂಯೋಜನೆ ಮಾಡಿಕೊಂಡಿದ್ದ ಒಟ್ಟು 19 ಖಾಸಗಿ ಕಾನೂನು ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಲು ತಾತ್ವಿಕವಾಗಿ ಒಪ್ಪಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಸರ್ಕಾರದ ಅನುದಾನಕ್ಕೆ ಒಳಪಡಿಸಿದ ಖಾಸಗಿ ಕಾನೂನು ಕಾಲೇಜುಗಳ ಪೈಕಿ ಕ್ರಮ ಸಂಖ್ಯೆ: 01 ರ **ವೈಕುಂಠ ಬಾಳಿಗಾ ಕಾನೂನು ಕಾಲೇಜು, ಉಡುಪಿ** ಇಲ್ಲಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ನೇಮಕಾತಿಯನ್ನು ಅನುಮೋದಿಸಲಾಗಿದೆ.

ಸದರಿ ಆದೇಶದಲ್ಲಿ ಕೆಲವೊಂದು ಕಾರಣಕ್ಕಾಗಿ ಬೋಧಕ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸಿರುವುದಿಲ್ಲ, ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸದೇ ಇರುವ ಪ್ರಕರಣಗಳ ಬಗ್ಗೆ ಸಂಬಂಧಪಟ್ಟ ಸಿಬ್ಬಂದಿಗಳು ಈ ಆದೇಶ ಹೊರಡಿಸಿದ ಒಂದು ತಿಂಗಳೊಳಗಾಗಿ ಯುಕ್ತ ಮಾರ್ಗದಲ್ಲಿ ಅಗತ್ಯ ದಾಖಲಾತಿಗಳೊಂದಿಗೆ ಸರ್ಕಾರಕ್ಕೆ ಮನವಿ ಸಲ್ಲಿಸಿದಲ್ಲಿ, ಅಂತಹ ಮನವಿಗಳನ್ನು ನಿಯಮಾನುಸಾರ ಪರಿಶೀಲಿಸಲಾಗುವುದು ಎಂದು ದಿನಾಂಕ: 26.08.2015ರ ಆದೇಶದಲ್ಲಿ ಸೂಚಿಸಲಾಗಿತ್ತು.

ಅದರಂತೆ, ಮೇಲೆ ಓದಲಾದ (4)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ದಿನಾಂಕ: 26.08.2015ರ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸದೇ ಇರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಬಗ್ಗೆ ಮಾಹಿತಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

**ವೈಕುಂಠ ಬಾಳಿಗಾ ಕಾನೂನು ಕಾಲೇಜು, ಉಡುಪಿ** ಇಲ್ಲಿ 15–ಬೋಧಕ ಮತ್ತು 13–ಬೋಧಕೇತರ ಹುದ್ದೆಗಳು ಮಂಜೂರಾಗಿದ್ದು, ದಿನಾಂಕ:26.08.2015ರ ಸರ್ಕಾರಿ ಆದೇಶದಲ್ಲಿ 09–ಬೋಧಕರು ಮತ್ತು 08–ಬೋಧಕೇತರ ಹುದ್ದೆಗಳನ್ನು ವೇತನಾನುದಾನಕ್ಕೆ ಒಳಪಡಿಸಲಾಗಿದೆ. ಬೋಧಕ ಹುದ್ದೆಗಳ ಪೈಕಿ 03–ಮೀಸಲಾತಿ ಹುದ್ದೆಗಳನ್ನು ಹೊರತುಪಡಿಸಿ, 03–ಸಹಾಯಕ ಪ್ರಾಧ್ಯಾಪಕರ ಹುದ್ದೆ ಖಾಲಿಯಿರುತ್ತದೆ. ಬೋಧಕೇತರ ಹುದ್ದೆಗಳಲ್ಲಿ ಮೀಸಲಾತಿ ಹುದ್ದೆಗಳನ್ನು ಹೊರತುಪಡಿಸಿ 01–ಸಿ.ಸಿ.ಟಿ. ಮತ್ತು 01–ಬೆರಳಚ್ಚುಗಾರರ ಹುದ್ದೆ ಖಾಲಿಯಿರುತ್ತದೆ.

ದಿನಾಂಕ:26.08.2015ರ ಸರ್ಕಾರಿ ಆದೇಶದಲ್ಲಿ ಸಹಾಯಕ ಪ್ರಾಧ್ಯಾಪಕರಾದ ಶ್ರೀಮತಿ ಜಯಮೋಲ್ ಪಿ.ಎಸ್. ಇವರು ನೇಮಕಾತಿ ಸಮಯದಲ್ಲಿ ವಯೋಮಿತಿ ಮೀರಿರುವುದರಿಂದ ಇವರನ್ನು ವೇತನಾನುದಾನಕ್ಕೆ ಒಳಪಡಿಸಿರುವುದಿಲ್ಲ. ಆದರೆ ಮೇಲೆ ಓದಲಾದ (4)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಶ್ರೀಮತಿ ಜಯಮೋಲ್ ಪಿ.ಎಸ್. ಇವರು ಹಿಂದುಳಿದ ವರ್ಗ 2ಎ ಗೆ ಸೇರಿರುತ್ತಾರೆ ಎಂದು ಹಾಗೂ ಸದರಿಯವರು ನಿಗಧಿತ ವಿದ್ಯಾರ್ಹತೆಯಾದ ಎನ್ಇಟಿ ಯನ್ನು ಪಡೆದಿರುವುದರಿಂದ ಇವರನ್ನು ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ವೇತನಾನುದಾನಕ್ಕೆ ಒಳಪಡಿಸಬಹುದು ಎಂದು ಅಭಿಪ್ರಾಯ ನೀಡಿರುತ್ತಾರೆ.

ಶ್ರೀ ಪ್ರಕಾಶ್ ರಾವ್ ಡಿ. ದೈಹಿಕ ಶಿಕ್ಷಣ ಬೋಧಕರು, ಇವರನ್ನು ದಿನಾಂಕ:26.08.2015ರ ಆದೇಶದಲ್ಲಿ ರಾಜ್ಯ ವೇತನ ಶ್ರೇಣಿಯಲ್ಲಿ ವೇತನಾನುದಾನಕ್ಕೆ ಒಳಪಡಿಸಲಾಗಿದೆ. ಇವರು ದಿನಾಂಕ: 01.07.1993 ರಂದು ನೇಮಕಾತಿ ಹೊಂದಿದ್ದು, ದಿನಾಂಕ:09.07.2008 ರಲ್ಲಿ ಎಂ.ಫಿಲ್ ಪದವಿ ಪಡೆದಿದ್ದು ಸದರಿಯವರು ಯು.ಜಿ.ಸಿ. ವೇತನ ಶ್ರೇಣಿಗೆ ಅರ್ಹರಿರುತ್ತಾರೆ ಎಂದು ಕಾಲೇಜು ಶಿಕ್ಷಣ ಆಯುಕ್ತರು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 49 ಕೆಎಲ್ಎಂ 2013, ಬೆಂಗಳೂರು, ದಿನಾಂಕ: 16.07.2016.**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ **ವೈಕುಂಠ ಬಾಳಿಗಾ ಕಾನೂನು ಕಾಲೇಜು, ಉಡುಪಿ** ಇಲ್ಲಿ 03–ಜಿ.ಎಂ. ಸಹಾಯಕ ಪ್ರಾಧ್ಯಾಪಕರ ಹುದ್ದೆಗಳು ಖಾಲಿಯಿದ್ದು. ಈ ಕೆಳಕಂಡ ಸಹಾಯಕ ಪ್ರಾಧ್ಯಾಪಕರನ್ನು ಆದೇಶ ಹೊರಡಿಸಿದ ದಿನಾಂಕದಿಂದ ಈ ಕೆಳಕಂಡ ಷರತ್ತುಗಳೊಂದಿಗೆ ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರವು ಸಹಮಿತಿ ನೀಡಿದೆ.

| ಕ್ರ.ಸಂ. | ಹೆಸರು ಮತ್ತು ಹುದ್ದೆ | ಜನ್ಮ ದಿನಾಂಕ | L.L.M ಶೇಕಡಾ ಅಂಕ | ಮೀಸಲಾತಿ | ಸೇವೆಗೆ ಸೇರಿದ ದಿನಾಂಕ | ವೇತನ ಶ್ರೇಣಿ |
|---|---|---|---|---|---|---|
| **1.** | ಶ್ರೀಮತಿ ಜಯಮೋಲ್ ಪಿ.ಎಸ್, ಸಹಾಯಕ ಪ್ರಾಧ್ಯಾಪಕರು | 22.05.1976 | 60 | 2ಎ | 01.07.2012 | ಯು.ಜಿ.ಸಿ. ವೇತನ ಶ್ರೇಣಿ (NET ವಿದ್ಯಾರ್ಹತೆ ಹೊಂದಿರುತ್ತಾರೆ) |

ಶ್ರೀ ಪ್ರಕಾಶರಾವ್.ಡಿ (ದೈಹಿಕ ಶಿಕ್ಷಣ ಬೋಧಕರು) ಈ ಆದೇಶವನ್ನು ಹೊರಡಿಸಿದ ದಿನಾಂಕದಿಂದ ರಾಜ್ಯ ವೇತನ ಶ್ರೇಣಿಯಿಂದ ಯು.ಜಿ.ಸಿ. ವೇತನ ಶ್ರೇಣಿಗೆ ಪರಿಷ್ಕರಣೆ ಮಾಡಲು ಸರ್ಕಾರವು ಸಹಮತಿ ನೀಡಿದೆ.

| ಕ್ರ.ಸಂ. | ಹೆಸರು ಮತ್ತು ಹುದ್ದೆ | ಜನ್ಮ ದಿನಾಂಕ | ಈಗಾಗಲೇ ಜಾರಿಯಲ್ಲಿರುವ ವೇತನ ಶ್ರೇಣಿ | ವೇತನ ಶ್ರೇಣಿ |
|---|---|---|---|---|
| 1. | ಶ್ರೀ ಪ್ರಕಾಶರಾವ್ ಡಿ. ದೈಹಿಕ ಶಿಕ್ಷಣ ಬೋಧಕರು | 21.05.1964 | ರಾಜ್ಯ ವೇತನ ಶ್ರೇಣಿ | ಯು.ಜಿ.ಸಿ. ವೇತನ ಶ್ರೇಣಿ * M.Phil ವಿದ್ಯಾರ್ಹತೆ **ದಿನಾಂಕ: 09.07.2008ರಂದು ಹೊಂದಿರುತ್ತಾರೆ** (ಆದೇಶ ಇಡಿ **37** ಯುಎನ್ಇ 2009 **ದಿನಾಂಕ: 24.12.2009ರನ್ವಯ** ದಿನಾಂಕ:11.07.2009ರ ಮುಂಚೆ ಎಂ.ಫಿಲ್ ಪದವಿಯನ್ನು ಪಡೆದಿದ್ದರೆ ಯುಜಿಸಿ ವೇತನ ಶ್ರೇಣಿಗೆ ಅವಕಾಶವಿದೆ) |

**ಷರತ್ತುಗಳು :**

1) ಹಿಂದುಳಿದ ವರ್ಗಗಳ ಪ್ರಾತಿನಿಧ್ಯದಲ್ಲಿ ಮೀಸಲಾತಿ ಕೊರತೆಯನ್ನು ಭವಿಷ್ಯತ್ತಿನಲ್ಲಿ ತೆರವಾಗುವ ಎಲ್ಲಾ ಹುದ್ದೆಗಳನ್ನು ಮೀಸಲಾತಿ ಕೊರತೆ ಸರಿದೂಗುವವರೆಗೆ ಸಂಬಂಧಪಟ್ಟ ಮೀಸಲಾತಿ ಅಭ್ಯರ್ಥಿಗಳಿಂದಲೇ ಕಡ್ಡಾಯವಾಗಿ ನೇಮಕಾತಿ ಮಾಡಿಕೊಳ್ಳತಕ್ಕದ್ದು.
2) ಈ ಕಾಲೇಜಿನ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಗಳ ಶೈಕ್ಷಣಿಕ ಅರ್ಹತೆಗೆ ಸಂಬಂಧಿಸಿದ ಎಲ್ಲಾ ಅಂಕಪಟ್ಟಿ/ಪ್ರಮಾಣ ಪತ್ರಗಳ ಸತ್ಯಾಸತ್ಯತೆಯನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ದೃಢೀಕರಿಸಿಕೊಂಡ ನಂತರವೇ ಪಾವತಿಗೆ ಕ್ರಮಕೈಗೊಳ್ಳುವುದು.
3) ಈ ಆದೇಶದನ್ವಯ ವೇತನಾನುದಾನಕ್ಕೆ ಒಳಪಟ್ಟಿರುವ ಬೋಧಕ ಹಾಗೂ ಬೋಧಕೇತರರ ಸಿಬ್ಬಂದಿಗಳಿಗೆ ವೇತನ ಬಿಡುಗಡೆ ಮಾಡುವ ಮುನ್ನ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳ ಅಡಿಯಲ್ಲಿ ನೇಮಕಾತಿ ಹೊಂದಿದ್ದಲ್ಲಿ ಅಂತಹ ಸಿಬ್ಬಂದಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಖಚಿತಪಡಿಸಿಕೊಳ್ಳತಕ್ಕದ್ದು.
4) ಹುದ್ದೆ ಅನುಮೋದನೆಗೊಂಡಿರುವ ಸಿಬ್ಬಂದಿಯು ಯಾವುದೇ ಹಂತದಲ್ಲಿ ತಮ್ಮ ಹೇಳಿಕೆ/ಅಸತ್ಯವಾದ ಮಾಹಿತಿಯನ್ನು ಒದಗಿಸಿದಲ್ಲಿ ಅಂತಹ ನೇಮಕಾತಿಯನ್ನು ರದ್ದುಪಡಿಸಲಾಗುವುದು.
5) ಸಿಬ್ಬಂದಿಗಳ ವೇತನಾನುದಾನವು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.
6) ದಿನಾಂಕ: 24.12.1998ಕ್ಕಿಂತ ಹಿಂದೆ ನೇಮಕವಾದ ಉಪನ್ಯಾಸಕರುಗಳು ಸೇವಾ ವಿಚ್ಛಿನ್ನತೆಯನ್ನು ಹೊಂದಿರಬಾರದು.
7) ಮುಂದೆ ತುಂಬಲಾಗುವ ಹುದ್ದೆಗಳಿಗೆ ಸಂಬಂಧಿಸಿದ ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿಯನ್ನು ಪಡೆಯತಕ್ಕದ್ದು.
8) ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯವರು ಅನುದಾನ ರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ಯಾವುದೇ ಸೇವಾ ಸೌಲಭ್ಯಗಳಿಗೆ ಪರಿಗಣಿಸಲಾಗುವುದಿಲ್ಲ ಎಂಬ ಷರತ್ತಿಗೆ ಬದ್ಧನಾಗಿರುತ್ತೇನೆಂದು ₹. 50/- ಛಾಪಾ ಕಾಗದದಲ್ಲಿ ಮುಚ್ಚಳಿಕೆ ಪತ್ರವನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಬರೆಯಿಸಿಕೊಳ್ಳತಕ್ಕದ್ದು.
9) ಮೇಲಿನ ಆದೇಶದನ್ವಯ ಈ ಕಾಲೇಜಿಗೆ ಸಂಬಂಧಿಸಿದಂತೆ ನೇಮಕವಾಗಿರುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳಿಗೆ ವೇತನಾನುದಾನವನ್ನು ಬಿಡುಗಡೆ ಮಾಡುವ ಮುನ್ನ ನ್ಯಾಯಾಲಯದಲ್ಲಿ ಯಾವುದೇ ವಿಧವಾದ ವ್ಯಾಜ್ಯ/ವಿವಾದ ಬಾಕಿ ಇರುವುದಿಲ್ಲ ಎಂಬುದನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಖಚಿತಪಡಿಸಿಕೊಳ್ಳತಕ್ಕದ್ದು.
10) ಸದರಿ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸಿರುವ ಸಿಬ್ಬಂದಿಗಳನ್ನು ಹೆಚ್.ಆರ್.ಎಂ.ಎಸ್.ನಲ್ಲಿ ಅಳವಡಿಸಲು ಅಗತ್ಯ ಕ್ರಮ ಕೈಗೊಳ್ಳುವುದು.
11) ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾಗುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳನ್ನು ನೇಮಕಾತಿಗಾಗಿ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಿ ಸರ್ಕಾರದ ಪೂರ್ವಾನುಮತಿಯನ್ನು ಪಡೆಯುವುದು.
12) ಸಂಬಂಧಪಟ್ಟ ಜಂಟಿ ನಿರ್ದೇಶಕರು ಪ್ರತಿ ವರ್ಷವು ವೇತನಾನುದಾನಕ್ಕೆ ಒಳಪಟ್ಟಿರುವ ಕಾಲೇಜಿನ ಆಡಳಿತ ಮಂಡಳಿಯು ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವುದನ್ನು ದೃಢೀಕರಿಸಿದ ನಂತರವೇ ಆಯುಕ್ತಾಲಯದಿಂದ ಅನುದಾನ ಬಿಡುಗಡೆ ಮಾಡತಕ್ಕದ್ದು.
13) ವೇತನಾನುದಾನ ಬಿಡುಗಡೆಗೆ ಸಂಬಂಧಿಸಿದಂತೆ ಯಾವುದೇ ನ್ಯೂನತೆಗಳು ಉಂಟಾದಲ್ಲಿ ಸಂಬಂಧಪಟ್ಟ ಪ್ರಾದೇಶಿಕ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆಯವರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

ಮೇಲೆ ಅನುದಾನಕ್ಕೆ ಒಳಪಡಿಸಿರುವ **ವೈಕುಂಠ ಬಾಳಿಗಾ ಕಾನೂನು ಕಾಲೇಜು, ಉಡುಪಿ** ಈ ಸಂಸ್ಥೆಯ ವೇತನಾನುದಾನದ ವೆಚ್ಚವನ್ನು ಕಾನೂನು ಇಲಾಖೆಯ ಲೆಕ್ಕ ಶೀರ್ಷಿಕೆ ಸಂಖ್ಯೆ:2014–00–105–0–15 Private Aided Law Colleges-101-Grant-in aid Schemes (Plan) ರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 203 ವೆಚ್ಚ–10/2016, ದಿನಾಂಕ: 11.07.2016ರ ಸಹಮತಿಯನ್ವಯ ಹೊರಡಿಸಲಾಗಿದೆ.

PR. 492

SC.100

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಸ್. ಸುಧಾಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ.(ಮಾನವ ಹಕ್ಕುಗಳು)

## ಕಂದಾಯ ಸಚಿವಾಲಯ

**ವಿಷಯ :** ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಗೆ ಅಗತ್ಯವಿರುವ ಭೂದಾಖಲೆಗಳ ಸಹಾಯಕ ನಿರ್ದೇಶಕರು (ಕಾ.ನಿ) ಹುದ್ದೆಗಳನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 07 ಭೂದಾಸೇ (1) 2015, ದಿನಾಂಕ: 26.03.2016.

2. ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಇವರ ಪತ್ರದ ಸಂಖ್ಯೆ: SSLR/EST/MISC /MIS–114/14–15, ದಿನಾಂಕ: 05.05.2016.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರ ಸರ್ಕಾರದ ಆದೇಶ ಸಂಖ್ಯೆ: ಕಂಇ 07 ಭೂದಾಸೇ (1) 2015, ದಿನಾಂಕ: 26.03.2016ರಲ್ಲಿ ಭೂ ಮಾಪನ ಇಲಾಖೆಯ ಯೋಜನಾ ಕಾರ್ಯಗಳನ್ನು ರಾಜ್ಯಾದ್ಯಂತ ಅನುಷ್ಠಾನಗೊಳಿಸಲು/ಪ್ರಾರಂಭಿಸಲು ತಾಂತ್ರಿಕ ವಿಷಯದಲ್ಲಿ ಅದರಲ್ಲೂ ಭೂಮಾಪನ ವಿಷಯವಾಗಿ ಅತಿ ಹೆಚ್ಚು ನೈಪುಣ್ಯತೆ ಹೊಂದಿದಂತಹ ಅಧಿಕಾರಿ ವೃಂದದ ಅವಶ್ಯಕತೆ ಅತಿ ಹೆಚ್ಚಾಗಿರುವುದರಿಂದ, ಸಾರ್ವಜನಿಕ ಮತ್ತು ಇಲಾಖಾ ಆಡಳಿತಾತ್ಮಕ ಹಿತದೃಷ್ಟಿಯಿಂದ ಸಹಾಯಕ ನಿರ್ದೇಶಕರು (ಕಾ.ನಿ) ಹುದ್ದೆಗಳನ್ನು ಭೂಮಾಪನ ಇಲಾಖೆಯ ವಿವಿಧ ವೃಂದದ 125 ಹುದ್ದೆಗಳನ್ನು ರದ್ದುಗೊಳಿಸಿ, ಪರ್ಯಾಯವಾಗಿ 125 ಭೂದಾಖಲೆಗಳ ಸಹಾಯಕ ನಿರ್ದೇಶಕರ ಹುದ್ದೆಗಳನ್ನು ವೇತನ ಶ್ರೇಣಿ ₹. 21600–600–24600–700–28800–800–33600–900–39000–1050–40050 ರಲ್ಲಿ ಸೃಜಿಸಲಾಗಿದೆ. ಅಲ್ಲದೆ ಭೂಮಾಪನ ಇಲಾಖೆಯಲ್ಲಿ ಹಾಲಿ ಇರುವ 66 ಭೂದಾಖಲೆಗಳ ಸಹಾಯಕ ನಿರ್ದೇಶಕರ ಹುದ್ದೆಗಳೊಂದಿಗೆ ಹೊಸದಾಗಿ ಸೃಜಿಸಿದ 125 ಹುದ್ದೆಗಳನ್ನು ಸೇರಿ ಒಟ್ಟು 191 ಹುದ್ದೆಗಳನ್ನು ಭೂಮಾಪನ ಇಲಾಖೆಯ ಅವಶ್ಯಕತೆಗನುಗುಣವಾಗಿ ಹಂಚಿಕೆ ಮಾಡಿ ಸರ್ಕಾರದ ಅನುಮೋದನೆ ಪಡೆಯಲು ಸೂಚಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. (2)ರ ಪತ್ರದಲ್ಲಿ ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ರವರು ರಾಜ್ಯದ 51 ಉಪವಿಭಾಗಾಧಿಕಾರಿಗಳ ಕಛೇರಿಯಲ್ಲಿ ಭೂದಾಖಲೆಗಳ ಸಹಾಯಕ ನಿರ್ದೇಶಕರ ಹುದ್ದೆಗಳಿದ್ದು, ಅವುಗಳನ್ನು ತಾತ್ಕಾಲಿಕವಾಗಿ ಹಾಗೂ ಮುಂದಿನ ಆದೇಶದವರೆಗೆ ಪ್ರಸ್ತುತ ಕಛೇರಿಯಲ್ಲಿಯೇ ಮುಂದುವರೆಸಲು ತೀರ್ಮಾನಿಸಲಾಗಿದ್ದು, ಸದರಿ ಅಧಿಕಾರಿಗಳು ಉಪವಿಭಾಗಾಧಿಕಾರಿಗಳ ಕಛೇರಿಯಲ್ಲಿ ಇದ್ದು, ಸ್ಥಳೀಯ ತಾಲ್ಲೂಕಿನ ಭೂಮಾಪನ ಶಾಖೆಯ ಕಾರ್ಯವನ್ನು ನಿರ್ವಹಿಸುತ್ತಾರೆ. ಪ್ರತಿ ತಾಲ್ಲೂಕಿಗೆ ಹಂಚಿಕೆಯಾಗಿರುವ ಭೂದಾಖಲೆಗಳ ಸಹಾಯಕ ನಿರ್ದೇಶಕರುಗಳಿಗೆ ಬಟವಾಡೆ ಅಧಿಕಾರವನ್ನು ಪ್ರತ್ಯಾಯೋಜಿಸಿದ ನಂತರದಲ್ಲಿ ಉಪವಿಭಾಗಾಧಿಕಾರಿಗಳ ಕಛೇರಿಯಲ್ಲಿರುವ ಈ ಹುದ್ದೆಗಳನ್ನು ಸಹ ಆಯಾ ಉಪವಿಭಾಗದ ಸ್ಥಳೀಯ ತಾಲ್ಲೂಕು ಕಛೇರಿಗೆ ಹಂಚಿಕೆ ಮಾಡಲಾಗುವುದೆಂದು ತಿಳಿಸುತ್ತಾ, ಭೂದಾಖಲೆಗಳ ಸಹಾಯಕ ನಿರ್ದೇಶಕರ ಹುದ್ದೆಗಳನ್ನು ಪ್ರಸ್ತಾವನೆಗೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಹಂಚಿಕೆ ಮಾಡುವುದಕ್ಕೆ ಸರ್ಕಾರದ ಅನುಮೋದನೆ ನೀಡಲು ಕೋರಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 07 ಭೂದಾಸೇ (1) 2015, ಬೆಂಗಳೂರು, ದಿನಾಂಕ: 29–06–2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಭೂದಾಖಲೆಗಳ ಸಹಾಯಕ ನಿರ್ದೇಶಕರ ವೃಂದದ 191 ಹುದ್ದೆಗಳನ್ನು ವಿವಿಧ ಕಛೇರಿ/ತಾಲ್ಲೂಕುಗಳಿಗೆ ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದ ಕಾಲಂ 4 ರಲ್ಲಿರುವಂತೆ ಹಂಚಿಕೆ ಮಾಡಿರುವುದನ್ನು ಸರ್ಕಾರವು ಅನುಮೋದಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಪುಟ್ಟನಂಜಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಭೂಮಾಪನ)

### ಅನುಬಂಧ

**ಸರ್ಕಾರದ ಆದೇಶ ಸಂ: ಕಂಇ 07 ಭೂದಾಸೇ (1) 2015, ದಿನಾಂಕ: 26.03.2016 ರನ್ವಯ ಭೂದಾಖಲೆಗಳ ಸಹಾಯಕ ನಿರ್ದೇಶಕರ ವೃಂದದ 191 ಹುದ್ದೆಗಳನ್ನು ಹಂಚಿಕೆ ಮಾಡಿರುವ ವಿವರ ತೋರಿಸುವ ತಃಖ್ತೆ**

| ಕ್ರ. ಸಂ | ಕಛೇರಿಯ ಹೆಸರು | 26–3–2016ರ ಪೂರ್ವದಲ್ಲಿ ಮಂಜೂರಾದ ಹುದ್ದೆಗಳು | 26–3–2016ರ ಆದೇಶದಲ್ಲಿ ಸೃಜನೆಯಾದ ಹುದ್ದೆಗಳೊಂದಿಗೆ ಕಾಲಂ ನಂಬರ್ 3 ರಲ್ಲಿನ ಹುದ್ದೆಗಳನ್ನು ಕಛೇರಿವಾರು ಹಂಚಿಕೆ ಮಾಡಿರುವ ವಿವರ | ಷರಾ |
|---|---|---|---|---|
| 1 | 2 | 3 | 4 | 5 |
| 1. | ಕೇಂದ್ರ ಕಛೇರಿ, ಬೆಂಗಳೂರು | 1 | 1 | |
| 2. | ಭೂ.ಸ.ನಿ, ನಗರಮಾಪನ ತಂಡ–1, ಬೆಂಗಳೂರು | 1 | 1 | |
| 3. | ಭೂ.ಸ.ನಿ, ನಗರಮಾಪನ ತಂಡ–2, ಬೆಂಗಳೂರು | 1 | 1 | |
| 4. | ಭೂ.ಸ.ನಿ, ನಗರಮಾಪನ ತಂಡ–3, ಬೆಂಗಳೂರು | 1 | 1 | |
| 5. | ನಗರಮಾಪನ ಯೋಜನಾ ಕಛೇರಿ, ಮೈಸೂರು | 2 | 1 | ಸದರಿ ಕಛೇರಿಗೆ ಮಂಜೂರಾದ 2 ಹುದ್ದೆಗಳಲ್ಲಿ 1 ಹುದ್ದೆಯನ್ನು ತಹಶೀಲ್ದಾರ್, ಶಿರಾ ಕಛೇರಿಗೆ ಮರುಹಂಚಿಕೆ ಮಾಡಿದೆ. |
| 6. | ಭೂ.ಸ.ನಿ, ನಗರಮಾಪನ, ದಾವಣಗೆರೆ | 1 | 1 | |
| 7. | ಭೂ.ಸ.ನಿ, ನಗರಮಾಪನ, ವಿಜಯಪುರ | 1 | 1 | |
| 8. | ನಗರಮಾಪನ ಯೋಜನಾ ಕಛೇರಿ, ಹುಬ್ಬಳ್ಳಿ–ಧಾರವಾಡ | 1 | 1 | |

| 1 | 2 | 3 | 4 | 5 |
|---|---|---|---|---|
| 9. | ಭೂ.ಸ.ನಿ, ನಗರಮಾಪನ, ಕಲ್ಬುರ್ಗಿ | 1 | 1 | |
| 10. | ನಗರಮಾಪನ ಯೋಜನಾ ಕಛೇರಿ, ಬಳ್ಳಾರಿ | 1 | 1 | |
| 11. | ಭೂ.ಸ.ನಿ, ನಗರಮಾಪನ, ಬೆಳಗಾವಿ | 1 | 1 | |
| 12. | ಭೂ.ಸ.ನಿ, ಮರುಭೂಮಾಪನ, ಬೆಳಗಾವಿ | 1 | 1 | |
| 13. | ಭೂ.ಸ.ನಿ, ಮರುಭೂಮಾಪನ, ಹುಕ್ಕೇರಿ | 1 | 1 | |
| 14. | ಭೂ.ಸ.ನಿ, ಮರುಭೂಮಪನ, ಖಾನಾಪುರ | 1 | 1 | |
| 15. | ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ | 1 | 1 | |
| 16. | ತಹಶೀಲ್ದಾರ್, ಬೆಂಗಳೂರು ಉತ್ತರ, ಅಪರ (ಯಲಹಂಕ) | 0 | 1 | |
| 17. | ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ | 1 | 1 | |
| 18. | ತಹಶೀಲ್ದಾರ್, ಆನೇಕಲ್ | 0 | 1 | |
| 19. | ತಹಶೀಲ್ದಾರ್, ಕೆ.ಆರ್.ಪುರಂ (ಬೆಂಗಳೂರು ಪೂರ್ವ) | 0 | 1 | |
| 20. | ಉಪವಿಭಾಗಾಧಿಕಾರಿಗಳು, ದೊಡ್ಡಬಳ್ಳಾಪುರ | 1 | 1 | |
| 21. | ತಹಶೀಲ್ದಾರ್, ಹೊಸಕೋಟೆ | 0 | 1 | |
| 22. | ತಹಶೀಲ್ದಾರ್, ನೆಲಮಂಗಲ | 0 | 1 | |
| 23. | ತಹಶೀಲ್ದಾರ್, ದೇವನಹಳ್ಳಿ | 0 | 1 | |
| 24. | ಉಪವಿಭಾಗಾಧಿಕಾರಿಗಳು, ರಾಮನಗರ | 1 | 1 | |
| 25. | ತಹಶೀಲ್ದಾರ್, ಮಾಗಡಿ | 0 | 1 | |
| 26. | ತಹಶೀಲ್ದಾರ್, ಕನಕಪುರ | 0 | 1 | |
| 27. | ತಹಶೀಲ್ದಾರ್, ಚನ್ನಪಟ್ಟಣ | 0 | 1 | |
| 28. | ಉಪವಿಭಾಗಾಧಿಕಾರಿಗಳು, ಚಿಕ್ಕಬಳ್ಳಾಪುರ | 1 | 1 | |
| 29. | ತಹಶೀಲ್ದಾರ್, ಚಿಂತಾಮಣಿ | 0 | 1 | |
| 30. | ತಹಶೀಲ್ದಾರ್, ಶಿಡ್ಲಘಟ್ಟ | 0 | 1 | |
| 31. | ತಹಶೀಲ್ದಾರ್, ಬಾಗೇಪಲ್ಲಿ | 0 | 1 | |
| 32. | ತಹಶೀಲ್ದಾರ್, ಗುಡಿಬಂಡೆ | 0 | 1 | |
| 33. | ತಹಶೀಲ್ದಾರ್, ಗೌರಿಬಿದನೂರು | 0 | 1 | |
| 34. | ಉಪವಿಭಾಗಾಧಿಕಾರಿಗಳು, ತುಮಕೂರು | 1 | 1 | |
| 35. | ತಹಶೀಲ್ದಾರ್, ಗುಬ್ಬಿ | 0 | 1 | |
| 36. | ತಹಶೀಲ್ದಾರ್, ಕುಣಿಗಲ್ | 0 | 1 | |
| 37. | ಉಪವಿಭಾಗಾಧಿಕಾರಿಗಳು, ತಿಪಟೂರು | 1 | 1 | |
| 38. | ತಹಶೀಲ್ದಾರ್, ಶಿರಾ | 0 | 1 | |
| 39. | ತಹಶೀಲ್ದಾರ್, ತುರುವೇಕೆರೆ | 0 | 1 | |
| 40. | ತಹಶೀಲ್ದಾರ್, ಚಿಕ್ಕನಾಯಕನಹಳ್ಳಿ | 0 | 1 | |
| 41. | ಉಪವಿಭಾಗಾಧಿಕಾರಿಗಳು, ಮಧುಗಿರಿ | 1 | 1 | |
| 42. | ತಹಶೀಲ್ದಾರ್, ಕೊರಟಗೆರೆ. | 0 | 1 | |
| 43. | ತಹಶೀಲ್ದಾರ್, ಪಾವಗಡ | 0 | 1 | |
| 44. | ಉಪ ವಿಭಾಗಾಧಿಕಾರಿಗಳು, ಕೋಲಾರ | 1 | 1 | |
| 45. | ತಹಶೀಲ್ದಾರ್, ಶ್ರೀನಿವಾಸಪುರ | 0 | 1 | |
| 46. | ತಹಶೀಲ್ದಾರ್, ಬಂಗಾರಪೇಟೆ | 0 | 1 | |
| 47. | ತಹಶೀಲ್ದಾರ್, ಮಾಲೂರು | 0 | 1 | |
| 48. | ತಹಶೀಲ್ದಾರ್, ಮುಳಬಾಗಿಲು | | 1 | |
| 49. | ಉಪವಿಭಾಗಾಧಿಕಾರಿಗಳು, ಶಿವಮೊಗ್ಗ | 1 | 1 | |
| 50. | ಉಪವಿಭಾಗಾಧಿಕಾರಿಗಳು, ಸಾಗರ | 1 | 1 | |
| 51. | ತಹಶೀಲ್ದಾರ್, ಭದ್ರಾವತಿ | 0 | 1 | |
| 52. | ತಹಶೀಲ್ದಾರ್, ತೀರ್ಥಹಳ್ಳಿ | 0 | 1 | |
| 53. | ತಹಶೀಲ್ದಾರ್, ಸೊರಬ | 0 | 1 | |
| 54. | ತಹಶೀಲ್ದಾರ್, ಶಿಕಾರಿಪುರ | 0 | 1 | |
| 55. | ತಹಶೀಲ್ದಾರ್, ಹೊಸನಗರ | 0 | 1 | |

| 1 | 2 | 3 | 4 | 5 |
|---|---|---|---|---|
| 56. | ಉಪವಿಭಾಗಾಧಿಕಾರಿಗಳು, ಚಿತ್ರದುರ್ಗ | 1 | 1 | |
| 57. | ತಹಶೀಲ್ದಾರ್, ಹೊಳಲ್ಕೆರೆ | 0 | 1 | |
| 58. | ತಹಶೀಲ್ದಾರ್, ಚಳ್ಳಕೆರೆ | 0 | 1 | |
| 59. | ತಹಶೀಲ್ದಾರ್, ಹಿರಿಯೂರು | 0 | 1 | |
| 60. | ತಹಶೀಲ್ದಾರ್, ಹೊಸದುರ್ಗ | 0 | 1 | |
| 61. | ತಹಶೀಲ್ದಾರ್, ಮೊಳಕಾಲ್ಮೂರು | 0 | 1 | |
| 62. | ಉಪವಿಭಾಗಾಧಿಕಾರಿಗಳು, ದಾವಣಗೆರೆ | 1 | 1 | |
| 63. | ತಹಶೀಲ್ದಾರ್, ಚನ್ನಗಿರಿ | 0 | 1 | |
| 64. | ಉಪವಿಭಾಗಾಧಿಕಾರಿಗಳು, ಹರಪ್ಪನಹಳ್ಳಿ | 1 | 1 | |
| 65. | ತಹಶೀಲ್ದಾರ್, ಹರಿಹರ | 0 | 1 | |
| 66. | ತಹಶೀಲ್ದಾರ್, ಹೊನ್ನಾಳಿ | 0 | 1 | |
| 67. | ತಹಶೀಲ್ದಾರ್, ಜಗಳೂರು | 0 | 1 | |
| 68. | ಉಪವಿಭಾಗಾಧಿಕಾರಿಗಳು, ಮೈಸೂರು | 1 | 1 | |
| 69. | ಉಪವಿಭಾಗಾಧಿಕಾರಿಗಳು, ಹುಣಸೂರು | 1 | 1 | |
| 70. | ತಹಶೀಲ್ದಾರ್, ಹೆಚ್.ಡಿ.ಕೋಟೆ | 0 | 1 | |
| 71. | ತಹಶೀಲ್ದಾರ್, ಪಿರಿಯಾಪಟ್ಟಣ | 0 | 1 | |
| 72. | ತಹಶೀಲ್ದಾರ್, ನಂಜನಗೂಡು | 0 | 1 | |
| 73. | ತಹಶೀಲ್ದಾರ್, ಟಿ. ನರಸೀಪುರ | 0 | 1 | |
| 74. | ತಹಶೀಲ್ದಾರ್, ಕೆ.ಆರ್. ನಗರ | 0 | 1 | |
| 75. | ಉಪವಿಭಾಗಾಧಿಕಾರಿಗಳು, ಮಂಡ್ಯ | 1 | 1 | |
| 76. | ತಹಶೀಲ್ದಾರ್, ಮಳವಳ್ಳಿ | 0 | 1 | |
| 77. | ತಹಶೀಲ್ದಾರ್, ಶ್ರೀರಂಗಪಟ್ಟಣ | 0 | 1 | |
| 78. | ತಹಶೀಲ್ದಾರ್, ಮದ್ದೂರು | 0 | 1 | |
| 79. | ಉಪ ವಿಭಾಗಾಧಿಕಾರಿಗಳು, ಪಾಂಡವಪುರ | 1 | 1 | |
| 80. | ತಹಶೀಲ್ದಾರ್, ಕೃಷ್ಣರಾಜಪೇಟೆ (ಕೆ.ಆರ್.ಪೇಟೆ) | 0 | 1 | |
| 81. | ತಹಶೀಲ್ದಾರ್, ನಾಗಮಂಗಲ | 0 | 1 | |
| 82. | ತಹಶೀಲ್ದಾರ್, ಚಾಮರಾಜನಗರ | 0 | 1 | |
| 83. | ಉಪ ವಿಭಾಗಾಧಿಕಾರಿಗಳು, ಕೊಳ್ಳೇಗಾಲ | 1 | 1 | |
| 84. | ತಹಶೀಲ್ದಾರ್, ಗುಂಡ್ಲುಪೇಟೆ | 0 | 1 | |
| 85. | ತಹಶೀಲ್ದಾರ್, ಯಳಂದೂರು | 0 | 1 | |
| 86. | ಉಪ ವಿಭಾಗಾಧಿಕಾರಿಗಳು, ಚಿಕ್ಕಮಗಳೂರು | 1 | 1 | |
| 87. | ಉಪವಿಭಾಗಾಧಿಕಾರಿಗಳು, ತರೀಕೆರೆ | 1 | 1 | |
| 88. | ತಹಶೀಲ್ದಾರ್, ಮೂಡಿಗೆರೆ | 0 | 1 | |
| 89. | ತಹಶೀಲ್ದಾರ್, ಕೊಪ್ಪ | 0 | 1 | |
| 90. | ತಹಶೀಲ್ದಾರ್, ಶೃಂಗೇರಿ | 0 | 1 | |
| 91. | ತಹಶೀಲ್ದಾರ್, ಕಡೂರು | 0 | 1 | |
| 92. | ತಹಶೀಲ್ದಾರ್, ನರಸಿಂಹರಾಜಪುರ | 0 | 1 | |
| 93. | ಉಪವಿಭಾಗಾಧಿಕಾರಿಗಳು, ಹಾಸನ | 1 | 1 | |
| 94. | ತಹಶೀಲ್ದಾರ್, ಅರಸೀಕೆರೆ | 0 | 1 | |
| 95. | ಉಪ ವಿಭಾಗಾಧಿಕಾರಿಗಳು, ಸಕಲೇಶಪುರ | 1 | 1 | |
| 96. | ತಹಶೀಲ್ದಾರ್, ಅರಕಲಗೂಡು | 0 | 1 | |
| 97. | ತಹಶೀಲ್ದಾರ್, ಆಲೂರು | 0 | 1 | |
| 98. | ತಹಶೀಲ್ದಾರ್, ಬೇಲೂರು | 0 | 1 | |
| 99. | ತಹಶೀಲ್ದಾರ್, ಹೊಳೇನರಸೀಪುರ | 0 | 1 | |
| 100. | ತಹಶೀಲ್ದಾರ್, ಚನ್ನರಾಯಪಟ್ಟಣ | 0 | 1 | |
| 101. | ಉಪ ವಿಭಾಗಾಧಿಕಾರಿಗಳು, ಮಡಿಕೇರಿ | 1 | 1 | |
| 102. | ತಹಶೀಲ್ದಾರ್, ವಿರಾಜಪೇಟೆ | 0 | 1 | |

| 1 | 2 | 3 | 4 | 5 |
|---|---|---|---|---|
| 103. | ತಹಶೀಲ್ದಾರ್, ಸೋಮವಾರಪೇಟೆ | 0 | 1 | |
| 104. | ಉಪ ವಿಭಾಗಾಧಿಕಾರಿಗಳು, ಮಂಗಳೂರು | 1 | 1 | |
| 105. | ಉಪ ವಿಭಾಗಾಧಿಕಾರಿಗಳು, ಪುತ್ತೂರು | 1 | 1 | |
| 106. | ತಹಶೀಲ್ದಾರ್, ಬಂಟ್ವಾಳ | 0 | 1 | |
| 107. | ತಹಶೀಲ್ದಾರ್, ಬೆಳ್ತಂಗಡಿ | 0 | 1 | |
| 108. | ತಹಶೀಲ್ದಾರ್, ಸುಳ್ಯ | 0 | 1 | |
| 109. | ತಹಶೀಲ್ದಾರ್, ಉಡುಪಿ | 0 | 1 | |
| 110. | ಉಪವಿಭಾಗಾಧಿಕಾರಿಗಳು, ಕುಂದಾಪುರ | 1 | 1 | |
| 111. | ತಹಶೀಲ್ದಾರ್, ಕಾರ್ಕಳ | 0 | 1 | |
| 112. | ಉಪ ವಿಭಾಗಾಧಿಕಾರಿಗಳು, ಬೆಳಗಾವಿ | 1 | 1 | |
| 113. | ಉಪ ವಿಭಾಗಾಧಿಕಾರಿಗಳು, ಚಿಕ್ಕೋಡಿ | 1 | 1 | |
| 114. | ತಹಶೀಲ್ದಾರ್, ಹುಕ್ಕೇರಿ | 0 | 1 | |
| 115. | ತಹಶೀಲ್ದಾರ್ ಸವದತ್ತಿ | 0 | 1 | |
| 116. | ಉಪ ವಿಭಾಗಾಧಿಕಾರಿಗಳು, ಬೈಲಹೊಂಗಲ | 1 | 1 | |
| 117. | ತಹಶೀಲ್ದಾರ್, ಗೋಕಾಕ | 0 | 1 | |
| 118. | ತಹಶೀಲ್ದಾರ್, ರಾಮದುರ್ಗ | 0 | 1 | |
| 119. | ತಹಶೀಲ್ದಾರ್, ರಾಯಭಾಗ | 0 | 1 | |
| 120. | ತಹಶೀಲ್ದಾರ್, ಖಾನಾಪುರ | 0 | 1 | |
| 121. | ತಹಶೀಲ್ದಾರ್, ಅಥಣಿ | 0 | 1 | |
| 122. | ಉಪ ವಿಭಾಗಾಧಿಕಾರಿಗಳು, ಧಾರವಾಡ | 1 | 1 | |
| 123. | ತಹಶೀಲ್ದಾರ್, ಹುಬ್ಬಳ್ಳಿ | 0 | 1 | |
| 124. | ತಹಶೀಲ್ದಾರ್, ನವಲಗುಂದ | 0 | 1 | |
| 125. | ತಹಶೀಲ್ದಾರ್, ಕಲಘಟಗಿ | 0 | 1 | |
| 126. | ತಹಶೀಲ್ದಾರ್, ಕುಂದಗೋಳ | 0 | 1 | |
| 127. | ಉಪ ವಿಭಾಗಾಧಿಕಾರಿಗಳು, ಗದಗ | 1 | 1 | |
| 128. | ತಹಶೀಲ್ದಾರ್, ರೋಣ | 0 | 1 | |
| 129. | ತಹಶೀಲ್ದಾರ್, ಮುಂಡರಗಿ | 0 | 1 | |
| 130. | ತಹಶೀಲ್ದಾರ್, ನರಗುಂದ | 0 | 1 | |
| 131. | ತಹಶೀಲ್ದಾರ್, ಶಿರಹಟ್ಟಿ | 0 | 1 | |
| 132. | ಉಪ ವಿಭಾಗಾಧಿಕಾರಿಗಳು, ಹಾವೇರಿ | 1 | 1 | |
| 133. | ಉಪ ವಿಭಾಗಾಧಿಕಾರಿಗಳು, ಸವಣೂರು | 1 | 1 | |
| 134. | ತಹಶೀಲ್ದಾರ್, ರಾಣೇಬೆನ್ನೂರ | 0 | 1 | |
| 135. | ತಹಶೀಲ್ದಾರ್, ಬ್ಯಾಡಗಿ | 0 | 1 | |
| 136. | ತಹಶೀಲ್ದಾರ್, ಹಿರೇಕೆರೂರ | 0 | 1 | |
| 137. | ತಹಶೀಲ್ದಾರ್, ಶಿಗ್ಗಾಂವ್ | 0 | 1 | |
| 138. | ತಹಶೀಲ್ದಾರ್, ಹಾನಗಲ್ | 0 | 1 | |
| 139. | ಉಪ ವಿಭಾಗಾಧಿಕಾರಿಗಳು, ವಿಜಯಪುರ | 1 | 1 | |
| 140. | ತಹಶೀಲ್ದಾರ್, ಸಿಂದಗಿ | 0 | 1 | |
| 141. | ತಹಶೀಲ್ದಾರ್, ಬಸವನಬಾಗೇವಾಡಿ | 0 | 1 | |
| 142. | ತಹಶೀಲ್ದಾರ್, ಮುದ್ದೇಬಿಹಾಳ | 0 | 1 | |
| 143. | ಉಪ ವಿಭಾಗಾಧಿಕಾರಿಗಳು, ಇಂಡಿ | 1 | 1 | |
| 144. | ಉಪ ವಿಭಾಗಾಧಿಕಾರಿಗಳು, ಬಾಗಲಕೋಟೆ | 1 | 1 | |
| 145. | ಉಪ ವಿಭಾಗಾಧಿಕಾರಿಗಳು, ಜಮಖಂಡಿ | 1 | 1 | |
| 146. | ತಹಶೀಲ್ದಾರ್, ಬಾದಾಮಿ | 0 | 1 | |
| 147. | ತಹಶೀಲ್ದಾರ್, ಹುನಗುಂದ | 0 | 1 | |
| 148. | ತಹಶೀಲ್ದಾರ್, ಮುಧೋಳ | 0 | 1 | |
| 149. | ತಹಶೀಲ್ದಾರ್, ಬೀಳಗಿ | 0 | 1 | |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| 1 | 2 | 3 | 4 | 5 |
|---|---|---|---|---|
| 150. | ಉಪ ವಿಭಾಗಾಧಿಕಾರಿಗಳು, ಕಾರವಾರ | 1 | 1 | |
| 151. | ಉಪ ವಿಭಾಗಾಧಿಕಾರಿಗಳು, ಕುಮಟಾ | 1 | 1 | |
| 152. | ತಹಶೀಲ್ದಾರ್, ಹಳಿಯಾಳ | 0 | 1 | |
| 153. | ತಹಶೀಲ್ದಾರ್, ಸೂಪಾ (ಜೋಯಿಡಾ) | 0 | 1 | |
| 154. | ತಹಶೀಲ್ದಾರ್, ಅಂಕೋಲಾ | 0 | 1 | |
| 155. | ತಹಶೀಲ್ದಾರ್, ಹೊನ್ನಾವರ | 0 | 1 | |
| 156. | ತಹಶೀಲ್ದಾರ್, ಭಟ್ಕಳ | 0 | 1 | |
| 157. | ಉಪ ವಿಭಾಗಾಧಿಕಾರಿಗಳು, ಶಿರಸಿ | 1 | 1 | |
| 158. | ತಹಶೀಲ್ದಾರ್, ಸಿದ್ದಾಪುರ | 0 | 1 | |
| 159. | ತಹಶೀಲ್ದಾರ್, ಯಲ್ಲಾಪುರ | 0 | 1 | |
| 160. | ತಹಶೀಲ್ದಾರ್, ಮುಂಡಗೋಡ | 0 | 1 | |
| 161. | ಉಪ ವಿಭಾಗಾಧಿಕಾರಿಗಳು, ಕಲಬುರಗಿ | 1 | 1 | |
| 162. | ತಹಶೀಲ್ದಾರ್, ಜೇವರ್ಗಿ | 0 | 1 | |
| 163. | ಉಪ ವಿಭಾಗಾಧಿಕಾರಿಗಳು, ಸೇಡಂ | 1 | 1 | |
| 164. | ತಹಶೀಲ್ದಾರ್, ಚಿತ್ತಾಪುರ | 0 | 1 | |
| 165. | ತಹಶೀಲ್ದಾರ್, ಅಫಜಲ್‌ಪುರ | 0 | 1 | |
| 166. | ತಹಶೀಲ್ದಾರ್, ಆಳಂದ | 0 | 1 | |
| 167. | ತಹಶೀಲ್ದಾರ್, ಚಿಂಚೋಳಿ | 0 | 1 | |
| 168. | ಉಪವಿಭಾಗಾಧಿಕಾರಿಗಳು, ಯಾದಗಿರ | 1 | 1 | |
| 169. | ತಹಶೀಲ್ದಾರ್, ಶಹಾಪೂರ | 0 | 1 | |
| 170. | ತಹಶೀಲ್ದಾರ್, ಸುರಪುರ | 0 | 1 | |
| 171. | ಉಪವಿಭಾಗಾಧಿಕಾರಿಗಳು, ರಾಯಚೂರು | 1 | 1 | |
| 172. | ಉಪವಿಭಾಗಾಧಿಕಾರಿಗಳು, ಲಿಂಗಸುಗೂರು | 1 | 1 | |
| 173. | ತಹಶೀಲ್ದಾರ್, ದೇವದುರ್ಗ | 0 | 1 | |
| 174. | ತಹಶೀಲ್ದಾರ್, ಮಾನ್ವಿ | 0 | 1 | |
| 175. | ತಹಶೀಲ್ದಾರ್, ಸಿಂಧನೂರು | 0 | 1 | |
| 176. | ಉಪವಿಭಾಗಾಧಿಕಾರಿಗಳು, ಬಳ್ಳಾರಿ | 1 | 1 | |
| 177. | ಉಪವಿಭಾಗಾಧಿಕಾರಿಗಳು, ಹೊಸಪೇಟೆ | 1 | 1 | |
| 178. | ತಹಶೀಲ್ದಾರ್, ಸಿರಗುಪ್ಪ | 0 | 1 | |
| 179. | ತಹಶೀಲ್ದಾರ್, ಸಂಡೂರು | 0 | 1 | |
| 180. | ತಹಶೀಲ್ದಾರ್, ಕೂಡ್ಲಗಿ | 0 | 1 | |
| 181. | ತಹಶೀಲ್ದಾರ್, ಹಗರಿಬೊಮ್ಮನಹಳ್ಳಿ | 0 | 1 | |
| 182. | ತಹಶೀಲ್ದಾರ್, ಹಡಗಲಿ | 0 | 1 | |
| 183. | ಉಪವಿಭಾಗಾಧಿಕಾರಿಗಳು, ಕೊಪ್ಪಳ | 1 | 1 | |
| 184. | ತಹಶೀಲ್ದಾರ್, ಗಂಗಾವತಿ | 0 | 1 | |
| 185. | ತಹಶೀಲ್ದಾರ್, ಕುಷ್ಟಗಿ | 0 | 1 | |
| 186. | ತಹಶೀಲ್ದಾರ್, ಯಲಬುರ್ಗಿ | 0 | 1 | |
| 187. | ಉಪವಿಭಾಗಾಧಿಕಾರಿಗಳು, ಬೀದರ್ | 1 | 1 | |
| 188. | ಉಪವಿಭಾಗಾಧಿಕಾರಿಗಳು, ಬಸವಕಲ್ಯಾಣ | 1 | 1 | |
| 189. | ತಹಶೀಲ್ದಾರ್, ಹುಮನಾಬಾದ್ | 0 | 1 | |
| 190. | ತಹಶೀಲ್ದಾರ್, ಬಾಲ್ಕಿ | 0 | 1 | |
| 191. | ತಹಶೀಲ್ದಾರ್, ಔರಾದ | 0 | 1 | |
| | **ಒಟ್ಟು** | **66** | **191** | |
| | **ಹೊಸದಾಗಿ ಸೃಜನೆಯಾದ ಹುದ್ದೆಗಳು** | **125** | **–** | |
| | **ಒಟ್ಟು** | **191** | **191** | |

**P.R.529**

**ಸಿ. ಪುಟ್ಟನಂಜಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಭೂಮಾಪನ)

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59